ಬೆಲೆ : 1-75

# ಶೂದ್ರ



ಈ ಸಂಚಿಕೆಯಲ್ಲಿ :

ಶಿವರಾಮು ಪಡಿಕ್ಕಲ್—ರಾಘವೇಂದ್ರ ಪಾಟೀಲ್—ಡಾ॥ ಎಂ. ಚಿದಾನಂದಮೂರ್ತಿ ಡಾ॥ ಅನುಪಮ ನಿರಂಜನ—ವಿಜಯಾ--ಬಂದಗದ್ದೆ ರಾಧಾಕೃಷ್ಣ--ರಮಾಜಾನ ದರ್ಗಾ—ಎಸ್.ಜಿ. ಸಿದ್ಧರಾಮಯ್ಯ—ಎಚ್.ಕೆ. ಗಿರಿಜಾ—ಧರಣೇಂದ್ರ ಕುರಕುರಿ ವಿಶುಕುಮಾರ್ -- ಬಾಪು ಹೆದ್ದೂರ ಶೆಟ್ಟಿ — ಕನಸಿಗೊಂದು ಕಣ್ಣು.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಪುಟ : 10 ಜನವರಿ 1985 ಸಂಚಿಕೆ: 3

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ —ಆನಂದಮೂರ್ತಿ

ಮುಖಪುಟ : ಎಸ್. ಶ್ಯಾಮಸುಂದರ್‌ರವರ ಎಚಿಂಗ್
ಹಿಂದಿನ ಪುಟ ಕಲೆ : ಕೆ. ಜಿ. ಸುಬ್ರಹ್ಮಣ್ಯನ್ (ಮರಿಶಾಮಾಚಾರ್ ಮತ್ತು ವಿಶ್ವರೂಪಾಚಾರ್ ಹರುತ್ತಿರುವ 'ಕಲಾಕೋಶ' ಕೃತಿಯಿಂದ)

ಶೂದ್ರ ಬರದಿದ್ದರೆ ಪತ್ರ ಬರೆಯಿರಿ, ನೀವು ಅಭಿಮಾನದಿಂದ ಕಳಿಸುವ ಚಂದಾದಿಂದ ಶೂದ್ರ ಬರಬೇಕಾಗಿದೆ. ದಯವಿಟ್ಟು ಕಳಿಸಿ. ನಿಮಗೆ ತೊಂದರೆಯಾಗದಿದ್ದರೆ ಆಜೀವಸದಸ್ಯರಾಗಿ ಲೇಖನಗನ್ನು ಕಳಿಸುವಾಗ ಹದಿನೈದು ಪೈಸೆಯ ರಿಪ್ಲೈ ಕಾರ್ಡಿಡಿ.

ವಾರ್ಷಿಕ ಚಂದಾ : 20ರೂ.
ಆಜೀವ ಚಂದಾ : 200ರೂ. (ನಾಲ್ಕು ಕಂತುಗಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ
ಬೆಂಗೂರು-560 029

ಅಶೋಕ ಮೆಹತಾರವರ ಸಾವಿಗೆ, ತಮಿಳುನಾಡಿನ ರೈತಸಂಘದ ನಾರಾಯಣಸ್ವಾಮಿ ನಾಯಿಡುರವರ ಸಾವಿಗೆ, ಭೂಪಾಲ್ ದುರಂತದಲ್ಲಿ ಜೀವ ಕಳೆದುಕೊಂಡವರಿಗೆ ಹಾಗೂ ನಮ್ಮ ಹಿರಿಯ ಲೇಖಕರಾದ ರಾವ್‌ಬಹದೂರ್‌ರವರ ನಿಧನಕ್ಕೆ ಶೂದ್ರ ಸಂತಾಪ ವ್ಯಕ್ತಪಡಿಸುತ್ತೆ.

# ಬಾಡುವ ಕುಸುಮದ ಎದೆಯಾಳದಿ....

—ಶಿವರಾಮ ಪಡಿಕ್ಕಲ್*

ಈ ಶೀರ್ಷಿಕೆಯೇ ನಾನು ಸ್ವಲ್ಪ ಭಾವುಕನಾಗಿರುವುದನ್ನು ತಿಳಿಸಬಹುದು. ಹೌದು. ಅದಕ್ಕೆ ಕಾರಣವಿದೆ. ಸಾವು ಬದುಕಿನ ಬಗೆಗೆ ಗಾಢ ಚಿಂತನೆಗೆ ಹಚ್ಚಿರುವ ಮೂರು ಕವನ ಸಂಕಲನಗಳು ಈಗ ನನ್ನ ಕಣ್ಣ ಮುಂದಿವೆ. ಕೆ. ರಾಮಚಂದ್ರರ 'ಬಿದ್ದಗರಿ', ಯಮುರ್ಣಂಜ ರಾಮಚಂದ್ರ ಅವರ 'ವಿದಾಯ' ಇತ್ತೀಚಿನ ತಾ.ಸಂ. ರಾಮಚಂದ್ರ ಬರೆದ ಕೃಷ್ಣ ಸಂದೇಶ. ಮೂವರೂ ಇಪ್ಪತ್ತೆರಡು–ಇಪ್ಪತ್ತಮೂರರ ಹರೆಯದಲ್ಲಿ ಬದುಕಿನಿಂದ ವಂಚಿತರಾದವರು. ಗೀತಾಂಜಲಿಯ ಹಾಗೆ–ಸಾವಿನ ಮುನ್ನರಿವು ಹುಟ್ಟಿಸಿದ ತೀವ್ರ ಸಂವೇದನೆಯಿಂದ ಬರೆದವರು. ಎಂತಹ ಸಂವೇದನೆ ಅದು ? "ಭೀಕರ ವಿನಾಶದ ಪ್ರಪಾತದಂಚಿಗೆ ಸರಿಯುತ್ತಿರುವುದರ ಮುನ್ನರಿವು ಹುಟ್ಟಿಸಿದ ತೀವ್ರ ಸಂವೇದನೆ–ಸರ್ವಾಂಗ ಕಂಪನ" ಆತ್ಮವೆ ನಡುಗಿದ ಸ್ಥಿತಿ. ಆದ್ದರಿಂದಲೇ ವಿಷಾದದಲ್ಲಿ ಮನಸ್ಸು ಕೇಳುತ್ತದೆ "ಏನಾಗಿದೆ ಈ ರಾಮಚಂದ್ರರಿಗೆ?"

ಯಮುರ್ಣಂಜ ರಾಮಚಂದ್ರ ಅವರ ಬಗೆಗೆ ಬರೆಯುವುದೆಂದರೆ ಒಂದು ರೀತಿಯಲ್ಲಿ ಕರಗುವುದು. ಬದುಕು ಸಾವಿನ ಕುರಿತು ಆಳವಾಗಿ ಯೋಚಿಸುವುದು. ಎಲ್ಲೋ ಭಯಗೊಳ್ಳುವುದು. ಈ ಕವಿಯನ್ನು ಅವರ ಅನುಭವದ ವಿವಿಧ ನೆಲೆಗಳನ್ನು ಕಾವ್ಯದಲ್ಲಿ ಹುಡುಕಲು ಯತ್ನಿಸುವುದು ಇತ್ಯಾದಿ. ಈ ಹೊತ್ತಿನಲ್ಲಿ ಮಡುಗಟ್ಟಿರುವ ಭಾವ ವಿಷಾದ. ಇಂತಹ ವಿಮರ್ಶಾ ಬರವಣಿಗೆ ಎಲ್ಲೋ ಒಂದು ಕಡೆ "ತನ್ನ ಸೃಜನಾತ್ಮಕ ಉದ್ದೇಶದಿಂದ ವಂಚಿತವಾಗಿರುತ್ತದೆ" ಎಂದು ಎಚ್. ಎಸ್. ರಾಘವೇಂದ್ರರಾವ್ ಬರೆದಿದ್ದಾರೆ. ಕವಿಯನ್ನು ತಿಳಿಯದೇ ಹೋದಾಗ ತುಂಬ ವಸ್ತುನಿಷ್ಠವಾಗಿ ಬರೆಯುವುದು ಸಾಧ್ಯವೇನೋ. ಆದರೆ ನಾವೆಲ್ಲ ಬುದ್ಧಿ–ಭಾವ ಎರಡೂ ಸೇರಿದ ಮನುಷ್ಯರು. 20-22ರ ಹರೆಯದಲ್ಲಿ ಕಮರಿದ ಈ ಕವಿಯನ್ನು ಕುರಿತು ಬರೆಯುವಾಗಲಂತೂ ವಿಮರ್ಶೆಯ ತತ್ವ ಎಲ್ಲೋ ಶುಷ್ಕವೆನ್ನಿಸುತ್ತದೆ. ಅದನ್ನೂ ಮೀರಿದ ಸಂಗತಿಗಳು ಕಾಡಲಾರಂಭಿಸುತ್ತವೆ. ಈ ಕಾರಣದಿಂದ ನಾನು ಮತ್ತೆ ಮತ್ತೆ ಕೇಳಿಕೊಳ್ಳುತ್ತಿದ್ದೇನೆ. ಇಷ್ಟು ಜೋರಾಗಿ ನನ್ನನ್ನು ಅಲುಗಾಡಿಸುತ್ತಿರುವುದು ಯಾವುದು? ಕವಿತೆಯೋ? ಕವಿಯ ಸಾವೋ?

---

* ಶಿವರಾಮ ಪಡಿಕ್ಕಲ್, ಕನ್ನಡ ವಿಭಾಗ, ಮಂಗಳ ಗಂಗೋತ್ರಿ, ಮಂಗಳೂರು

ಇಂತಹ ಸಂದರ್ಭಗಳಲ್ಲಿ ಕವಿತೆಗಳನ್ನು ಕೇವಲ ಅವುಗಳ ಶಬ್ದ ಶರೀರದ ಮಿತಿಯಲ್ಲಿ ಪರಿಗ್ರಹಿಸಿ ವಿಶ್ಲೇಷಿಸುವುದು ತೀರಾ ವ್ಯಾವಹಾರಿಕ. ಅದರಾಚೆಯ ಸಂಗತಿಗಳೂ ನಮ್ಮನ್ನು ಕರೆಯುತ್ತಿರುತ್ತವೆ. ಈ ಎಲ್ಲ ಕವಿಗಳೂ ಸಾವು ಬದುಕಿನ ಮೂಲಭೂತ ಆದರೆ ಉತ್ತರವಿಲ್ಲದ ಪ್ರಶ್ನೆಗಳನ್ನೂ, ನಿಗೂಢ ಲೋಕಗಳನ್ನೂ ನಮ್ಮ ಮುಂದಿರಿಸಿ ಹೋಗಿದ್ದಾರೆ. ಯರ್ಮುಂಜ ರಾಮಚಂದ್ರ ಇದಕ್ಕೆ ಹೊರತಲ್ಲ. ಪ್ರಾಯಶಃ ಎದೆ ಢವಗುಟ್ಟಿಸುವ ಕಾವ್ಯ ವಸ್ತುಗಳಿಂದಲೇ ಈ ಕವಿ ಮುಖ್ಯವಾಗಿ ನಮ್ಮ ಗಮನವನ್ನು ಸೆಳೆಯುವುದು. ಯಾವಾಗ ಬೇಕೆಂದರೆ ಆಗ ಬರಬಹುದಾದ ಸಾವು,–ಆದರೆ ನಾವೆಲ್ಲ "ಈಗ ಬರುವುದಿಲ್ಲ" ಎಂದು ನಿಶ್ಚಿಂತರಾಗಿರುವ ಹಾಗೆ ನಂಬಿಸಿರುವ ನಮ್ಮೊಳಗಿನ ಈ ಅತಿಥಿ—ಇವರಿಗೆ ಹೆಚ್ಚು ಕಡಿಮೆ ದಿನ ತಿಳಿಸಿ ಬಂದಿದೆ. ಕಾಯುವಂತೆ ಮಾಡಿದೆ. ಯಾತನಾಮಯವಾದ ದೀರ್ಘ ಕಾಯುವಿಕೆ ಅದು.

ಎಂದಾದರು ನೀನು ಬಂದೆ ಬರುವೆಯೆಂದು ಕಾಯುತಿದ್ದೆ
ಇಂದು ನಾನೆ ಹೊರಟು ನಿಂತಿರುವೆನು
(ವಿದಾಯ)

ಹೀಗೆ ಸಿದ್ಧಗೊಂಡ ಕ್ಷಣಗಳು ಅನೇಕ. ಇಂತಹ ಸಿದ್ಧತೆಯ ಹಿಂದಿನ ಭಯ ಆತಂಕ ತಲ್ಲಣ ನಿರಾಸೆಗಳನ್ನು ಬರೆಯ ಗೋಳಾಗಿಸದೆ, ಕೇಳಿದವರಿಗೆ ಕಿರಿಕಿರಿ, ಭಾರ ಅನ್ನಿಸದ ಹಾಗೆ ಇವರು ಕಲೆಯಾಗಿಸಿದರು. ಕವಿತೆಗಳನ್ನು ಬರೆದರು. ಮೃತ್ಯುವಿನ ಕೈ ಬದುಕಿನ ಕೆಚ್ಚಲಿನಿಂದ ಈ ಕರುವಿನ ಮುಖ ದೂಡಲಾರಂಭಿಸಿದೆ. ಕರು 'ಗುದ್ದಿ ಗುದ್ದಿ' ಹಾಲುಣ್ಣುವ ಹಠ ಮಾಡಿದ ಹಾಗೆ 'ಬಿಡಲಾರೆ' ಎಂದು ಬದುಕನ್ನು ಅವರು ಆಳವಾಗಿ ಪ್ರೀತಿಸಿದರು. ಸಂವೇದನಾಶೀಲ ಮನಸ್ಸೊಂದರ ಸಾರ್ಥಕ ಈ ರೀತಿಯ ಪ್ರೀತಿಯಲ್ಲಿ ಮತ್ತು ಕಲೆಯಲ್ಲಿದೆ. ಹಾಗಾಗದೇ ಹೋದಾಗ ಅದು ಮನೋರೋಗದ ಲಕ್ಷಣವಾದೀತು. ಅನುಕಂಪ ಮಾತ್ರ ಅದಕ್ಕೆ ಸಿಗುವ ಮನ್ನಣೆ.

"ಅವರ ಜೀವಿತದ ಕೊನೆಯೆರಡು ಮೂರು ವರ್ಷಗಳಲ್ಲಿ ಮೃತ್ಯುವಿನ ಹೆಡೆಯ ನೆರಳಿನಲ್ಲೇ ತಮ್ಮ ತತ್ತರಿಸುತ್ತಿದ್ದ ಬಾಳನ್ನು ಹಿಡಿದು ನರಳಿದರೂ" ಉನ್ನತವಾದುದರ ಕಡೆಗೆ ಸದಾ ತುಡಿಯುತ್ತಿದ್ದ ಯರ್ಮುಂಜರ ಜೀವ ಚೈತನ್ಯ ಸೃಜನಶೀಲ ಕ್ರಿಯೆಯಲ್ಲಿ ತೊಡಗಿದ್ದುದರಿಂದಲೇ ಅವರು ಅತ್ಯುತ್ತಮ ಕವಿತೆಗಳನ್ನು ನೀಡಿದರು. ಕವಿಯ ಮರಣ ಮತ್ತು ಅದರ ದುಃಖ ಆಳವಾಗಿ ನಮಗೆಲ್ಲರಿಗೂ ತಟ್ಟುವುದು ಈ ಕಾರಣಕ್ಕಾಗಿಯೇ. ಅಪಾರವಾದ ನೋವಿನ ಅನುಭವ ಮತ್ತು ಅದರ ಫಲವಾಗಿರುವ ಯರ್ಮುಂಜರ ಕಾವ್ಯವನ್ನು ನಾವು ಈ ಹಿನ್ನೆಲೆಯೊಂದಿಗೆ ತಿಳಿಯುವುದು ಸೂಕ್ತ.

ಮೋಹರಹಿತವಾದ ಪ್ರಕೃತಿ ತನ್ನ ಗರ್ಭದಲ್ಲಿ ಸಾವು ಮತ್ತು ಸೃಷ್ಟಿಯ ಅವಳಿ ಕೂಸನ್ನು ಸದಾ ಹೊತ್ತಿದೆ. ಈ ದ್ವಂದ್ವವನ್ನು ತಿಳಿಯುವುದು, ಅರ್ಥಮಾಡಿಕೊಳ್ಳು



ಶೂದ್ರ

ವುದು, ಈ ಕುರಿತು ಒಂದು ಬಗೆಯ ವಿಶಿಷ್ಟ ಎಚ್ಚರವನ್ನು ಮೂಡಿಸುವುದು ಅ ಮೂಲಕ ಆರೋಗ್ಯಕರ ಮನೋನೆಲೆಯೊಂದನ್ನು ಆಗುಮಾಡುವುದು ಸಾಹಿತ್ಯದಿಂದ ಸಾಧ್ಯ. ದಿಕ್ಕೆಡಿಸುವ ಅನುಭವಗಳನ್ನೂ ಅರಗಿಸಿಕೊಂಡೇ ಈ ಸ್ತರವನ್ನು ಪಡೆಯು ಬೇಕಾಗಿದೆ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಕಾಲದ ಸಾಹಿತ್ಯದ ಆಶಯ ಕೂಡಾ 'ಸಾಯುತ್ತಿರುವ ಗಳಿಗೆ'ಗಳನ್ನು ಹಿಡಿಯುವುದೇ. ಮಗುವಿನ ಮುಗ್ಧತೆಯಿಂದ ಸಾವಿನ ಕಟುವಾಸ್ತವವನ್ನು ಗ್ರಹಿಸುತ್ತಾ ಹೋಗುವುದು ಪ್ರತಿಕ್ಷಣದ ಕೆಲಸವಾಗಿದೆ. 'ಪೂಜೆ' 'ದಾರುಣ' ಅನುಭವದ ಪ್ರತಿಫಲವಾಗಿರುವುದು ಈ ಅರ್ಥದಲ್ಲಿ.

ಯಮುನಾಜರಂತಹ ಕವಿಗಳಲ್ಲಿ ಇದು ತೀರಾ ವೈಯಕ್ತಿಕ ಹಂತದಲ್ಲಿ ತನ್ನೆಲ್ಲ ತೀವ್ರತೆಯಿಂದ ಧುತ್ತನೆ ಬಂದೆರಗಿದ ಅನುಭವ. ಈ ಕವಿಗಳ ಕಾವ್ಯದ ಯಶಸ್ಸಿಗೂ ಈ ತೀವ್ರತೆಗೂ ನಿಕಟ ಸಂಬಂಧವಿರುವುದು ಸ್ಪಷ್ಟ.

> ಬಂತು; ಬಂತೋ ಬಂತು! ಹೃದಯ ಬೆಳಗಲು ಬಂತು
> ಬಾಳ ನಂದಾ ದೀಪ ಬಂತು!
>
> (ಬಾಳ ಬೆಳಕು)

ಎಂದು 1948ರಲ್ಲಿ ಹದಿನೈದು ಹದಿನಾರರ ಕನಸು ಕಾಣುವ ಕಣ್ಣಿನಿಂದ ಬದುಕನ್ನು ನೋಡಿದ ಯಮುನಾಜ ರಾಮಚಂದ್ರರಿಗೆ ಎದುರಾದುದು ಈ ಬೆಳಕು ಮಾತ್ರವಲ್ಲ. ಗಾಂಧೀ ಹತ್ಯೆಯ ದಾರುಣ ಅನುಭವದಿಂದಲೇ ಅವರ ಕವಿತೆಯ ಆರಂಭ. ಅವರ ಮೊದಲ ಪ್ರಕಟಿತ ಕವನ "ಅಶ್ರು ಪೂಜೆ". "ಇಲ್ಲವೇ ಬಾಪೂಜಿ ಇನ್ನಿಲ್ಲದೇ ?"—ಪ್ರಜ್ಞೆ ಒಡಮೂಡುವ ಹೊತ್ತು ಅದು. ಅರೆತೆರೆದ ಕಣ್ಣು ಅಚ್ಚರಿಯಿಂದ, ದಿಗಿಲಿನಿಂದ ತೆರೆದೆವೆಯಾದ ಕ್ಷಣ.

ಈ ರೀತಿಯ ಅರಿವು ಸುತ್ತಲಿನ ಬದುಕು ನಂಬಿಕೆಗಳನ್ನು ಮುಗ್ಧವಾಗಿ ಅನುಸರಿಸಿಕೊಂಡು ಹೋಗಲು ಬಿಡುವುದಿಲ್ಲ. ಚಿಂತನೆಗೆ ಕಾರಣವಾಗುತ್ತದೆ. ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಅಭೀಪ್ಸೆ ಅಪೇಕ್ಷೆಗಳನ್ನು ಮುಂದಿಡುತ್ತದೆ.

> ಯಾವ ಶಿಲ್ಪಿಗಳೇಕೆ ಕಠಿಣ ಶಿಲೆಯನು ಕಡೆದು
> ನಿನ್ನ ಕಲ್ಲೆದೆಯ ನಿರ್ಮಿಸಿಹರೋ ?
>
> (ಗುಡಿಯ ಶಿಲೆಗೆ)

ಎಂದು ದೇವರನ್ನು ಪ್ರಶ್ನಿಸಿ, ಕಲ್ಲೊಡಲು ಬೇಡ, ಕಲ್ಲುಮನ ಬೇಡ ಎಂದು ಪ್ರಾರ್ಥನೆಯಾಗಿದೆ. ಆದರೆ ಪ್ರಾರ್ಥನೆಯ ಮಾತುಗಳು ತಲುಪುವುದಕ್ಕೂ ಹಾಡಿರುವ ಎದೆಯೊಂದು ಬೇಕು. ಕಾವ್ಯದ ಒಳ ಎಚ್ಚರ. ಮೃದುತ್ವವನ್ನು ಕಳೆದು

ಕೊಂಡ ಕಾರಿಣ್ಯ ಪ್ರಾರ್ಥನೆಯನ್ನು ಗೇಲಿಯಿಂದ ಕಾಣುತ್ತದೆ. ಆಗ 'ಹಾಳಾಗದಿರು ಎಚ್ಚರಿಕೆ' ಹಿಂದೆ ಇರುವುದು ಮಾನವತೆಯ ಬಗೆಗಿನ ಕಳಕಳಿ ಮತ್ತು ಆಳವಾದ ದುಃಖವನ್ನು ಕಳೆದುಕೊಂಡಾಗ ಕವಿತೆ ಗೈರು ಹಾಜರಾಗುತ್ತದೆ.

ಸ್ವಾತಂತ್ರ್ಯದ, ವಿಶೇಷವಾದ ಎಂದಿನಂತಲ್ಲದ ನಸುಕಿನ ಸಂಭ್ರಮವನ್ನು ಕಂಡು ಸಂಭ್ರಮಿಸಿದ ಕವಿ ಹೃದಯ ಅದರ ಆಳದಲ್ಲಿ ಮೊಳೆಯುತ್ತಿದ್ದ ಪ್ರಳಯದ ಸೂಚನೆಗಳಿಂದ ಕಂಗಾಲಾಯಿತು. 1949ರ ಆಗಸ್ಟ್ 15ರಂದು ಬರೆದ 'ಹದಿನೈದರ ಬೆಳಗು' ಅಂತಹ ಸೂಚನೆಯಾಗಿ ಕವಿಗೆ ಕಂಡಿದೆ. ಅಬ್ಬರ ಸಂಕೀರ್ತನೆಗಳಿಂದ ರೋಸಿ ಥರಥರನೆ ಸಿಡಿದು ಬಂದ ಮಳೆಯಾಗಿದೆ ಅದು. ಈ ನರಕ ಕೂಪಕ್ಕೆ ಹೊಸ ಬೆಳಕು ಎಂದು ಬಂದೀತು? ಎಂದು ಅಳುತ್ತಾ ಬಂದಿದೆ. ಈ ಅರಿವಿನ ಸ್ಪಷ್ಟ ಸೂಚನೆಗಳನ್ನು ಯರ್ಮುಂಜರು ಸಂಪಾದಿಸುತ್ತಿದ್ದ ಕೈ ಬರಹದ ಮಾಸಪತ್ರಿಕೆ ಪಾಂಚಜನ್ಯದ ಸಂಪಾದಕೀಯಗಳಿಂದ ಪಡೆಯಬಹುದು.

ಮೊದಲ ಗಣರಾಜ್ಯದ ದಿನ ಯರ್ಮುಂಜ ಬರೆದರು:

> "ಈ ಸಂದರ್ಭದಲ್ಲಿ ಕಣ್ಣೀರು ನಿರಾಶೆ ಹಸಿವುಗಳನ್ನು ಎದುರಿಸಬೇಕಾದೀತು, ಇಂತಹ ಬುದ್ಧಿ, ಕರ್ತವ್ಯ ಜ್ಞಾನಗಳು ನಮ್ಮಲ್ಲಿ ತುಂಬಿರಲಿ. ಸ್ವಾತಂತ್ರ್ಯದ ಹೆಸರಿನಲ್ಲಿ ಉಂಟಾದ ವಿಕಾರಗಳು ನಮ್ಮನ್ನು ಹಾದಿಗೆಡಿಸದಿರಲಿ" (ಪಾಂಚಜನ್ಯ ಫೆ. 50)

1951ರ ಭಾರತದ ಪ್ರಥಮ ಚುನಾವಣೆ, ಬಹು ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವೊಂದರ ಮೊದಲ ಚುನಾವಣೆಯನ್ನು ಜಗತ್ತೇ ಕಣ್ಣುಟ್ಟು ಕಾಯುತ್ತಿತ್ತು. ಈ ಸಂದರ್ಭದಲ್ಲಿ ದೇಶದಾದ್ಯಂತ ಅಣಬೆಗಳಂತೆ ತಲೆ ಎತ್ತಿದ ಪಕ್ಷ ಪ್ರತಿಪಕ್ಷಗಳ ಅಭಿಪ್ರಾಯ ಭೇದಗಳು ತಾತ್ವಿಕ ಸ್ವರೂಪದವು ಅಲ್ಲ ಎನ್ನುವುದನ್ನು 18ರ ಹರೆಯದ ರಾಮಚಂದ್ರ ಗ್ರಹಿಸಿದರು. ಅವರ ಸಂಪಾದಕೀಯ, ಇಂದಿನ ಎಲ್ಲ ರಾಜಕೀಯ ವಿಕೃತಿಗಳೂ ವಿಷಬೀಜ ಸ್ವರೂಪದಲ್ಲಿ ಅಂದೇ ಕಂಡಿಯೊಡೆದುದನ್ನು ಹೇಳುತ್ತದೆ:

> "ಇಂದು ಓಟಿನ ಬೇಟೆಗಾಗಿ ಅಧಿಕಾರದ ಆಸೆಗಾಗಿ ನೂರು ಪಕ್ಷಗಳನ್ನು ಕಟ್ಟಿಕೊಂಡವರು ತಮ್ಮ ಪ್ರಚಾರ ಪ್ರಾಬಲ್ಯಕ್ಕಾಗಿ ವ್ಯಯಿಸುವ ನೂರರ ಒಂದಂಶದಷ್ಟನ್ನು ಹಳ್ಳಿಗರ ವಿಚಾರ ಪ್ರಚೋದನೆಗಾಗಿ ವೆಚ್ಚ ಮಾಡುತ್ತಿದ್ದಲ್ಲಿ ಈ ಪರಿಸ್ಥಿತಿ ಉಂಟಾಗುತ್ತಿದ್ದಿಲ್ಲ.
>
> ಚುನಾವಣೆಗಿದ್ದ ಈ ಒಂದು ವರ್ಷದ ಪೂರ್ವದಲ್ಲಿ ಪಕ್ಷಗಳ ಸಂಖ್ಯೆಯು ಹತ್ತರಷ್ಟು ಹೆಚ್ಚಿದೆ, ಪಕ್ಷ ಪಕ್ಷಗಳೊಳಗೆ, ವ್ಯಕ್ತಿ ವ್ಯಕ್ತಿಗಳೊಳಗೆ

ಭಿನ್ನಾಭಿಪ್ರಾಯಗಳು ಬಲವಾಗುತ್ತಿವೆ. ಸುಶಿಕ್ಷಿತರೆನಿಸಿದ ಈ ಕೆಲವೇ ಮಂದಿ ಮನದಾಳಗಳಲ್ಲಿ ಹಬ್ಬಿರುವ ಈ ದ್ವೇಷ ಅಸೂಯೆಗಳು ಪ್ರಾಯಶಃ ಉಳಿದ ಜನಕೋಟಿಯಲ್ಲೆಲ್ಲೂ ಕಾಣಸಿಗದು”

(ಪಾಂಚಜನ್ಯ 1951)

ಈ ಗ್ರಹಿಕೆಗಳನ್ನು ಓದುತ್ತಿರುವಾಗ ಇಂದಿನ ಯುವಜನಾಂಗ ಕಣ್ಣಮುಂದೆ ಹಾಯುತ್ತಿದೆ. ಭದ್ರಗ್ರಹಿಕೆ ಮತ್ತು ಹಿರಿದಾದ ತಾತ್ವಿಕ ನೆಲೆಯೊಂದನ್ನು ಹಾರೈಸುವ ಅಂತಹುದಕ್ಕಾಗಿ ದೈನಿಕದ ಬದುಕನ್ನು ಅಪಾಯಕ್ಕೀಡುಮಾಡಬಲ್ಲ ದಿಟ್ಟತನ ಎಲ್ಲಿ ಮಾಯವಾಗಿದೆ? ನಮ್ಮ ಟೀನ್‌ಎಜ್‌ಗೆ ಏನಾಗಿದೆ?

“ಯಮುರ್ಗುಂಜ ರಾಮಚಂದ್ರರ ಜೀವ ಸಾಮಾನ್ಯವಾದದ್ದರಲ್ಲಿ ತೃಪ್ತಿಯನ್ನು ಕಂಡು ಬಾಳಿನ ಒಂದು ಕೆಳಮಟ್ಟದಲ್ಲಿ ಜೀವನದ ಒಂದು ಗುರಿಯನ್ನು ಸಾಧಿಸಿ ಕೃತಾರ್ಥವಾಗುವಂಥದಿರಲಿಲ್ಲ. ತನ್ನ ಸುತ್ತಮುತ್ತಣ ವಾತಾವರಣವನ್ನು ಮೀರಿ ಕ್ಷಣಕ್ಷಣಕ್ಕೂ ಮೇಲೆರಲು ಬಯಸುತ್ತಾ ಉತ್ತುಂಗವೂ ವಿಶಾಲವೂ ಆದ ತನ್ನ ಕನಸಿನ ಸಾಮ್ರಾಜ್ಯವನ್ನು ಅಂಗುಲ ಅಂಗುಲವಾಗಿ ಆವರಿಸಿ ಆಕ್ರಮಿಸಿಕೊಳ್ಳಲು ಯತ್ನಿಸುತ್ತಿದ್ದ ಉನ್ಮುಖ ಚೇತನ ಆತನದು” (ಅಡಿಗ-ವಿದಾಯ ಹಿನ್ನುಡಿ)

ಅಮೃತ ಕುಂಭಕ್ಕಾಗಿ ಹಾತೊರೆದು ಕುಣಿಯುತ್ತಿರುವ ಎಳೆಯ ಮನಸ್ಸಿನ ಮುಂದೆ ವಸ್ತು ಪ್ರಪಂಚದ ಕಟುತ್ವ ನಿಚ್ಚಳವಾಗಿ ಬಿಚ್ಚಿಕೊಂಡ ಬಳಿಕ ಹೆಚ್ಚು ಗಟ್ಟಿಯಾದ ಕವಿತೆಗಳು ಬಂದುವು.

ಏನೆ ಪುಟ್ಟ ಮಲ್ಲಿಗೆ,
ಏಕೆ ಬಂತು ಈ ಕಂಬನಿ ನಿನ್ನ ಮೃದು ಕಪೋಲಕೆ?
ಯಾರು ಉಣ್ಣಲಿಲ್ಲವೆಂದೆ ನಿಮ್ಮ ಗಂಧದೌತಣವ?
ಯಾರಿಗೂ ಅರ್ಪಿಸಿಲ್ಲವೆಂದೆ ನಿಮ್ಮ ಹರಣವ?

(ಮಸಣದ ಹೂಗಳು)

ಇಂತಹ ರಸಕಲ್ಪನೆಯನ್ನು ನಿರಾಕರಿಸಿ ಕೈಬಿಟ್ಟು ಒಮ್ಮೆ ಒಳಲೋಕವನ್ನು ಒಮ್ಮೆ ಹೊರಲೋಕವನ್ನು ತೆರೆದ ಕಣ್ಣಿನಿಂದ ಕಾಣುವ ಕವಿ ತನ್ನ ಅನುಭವಗಳ ಸಮನ್ವಯ ಸಾಧಿಸಲು ಯತ್ನಿಸುವ ಪರಿ ಮತ್ತು ಅವುಗಳಿಗೆ ತಕ್ಕ ಅಭಿವ್ಯಕ್ತಿಯನ್ನು ನೀಡುವ ಪ್ರಯತ್ನಗಳನ್ನು ಮುಂದೆ ಕಾಣುತ್ತೇವೆ. ವಿಫಲತೆ ನಿರಾಶೆ, ನಿಸ್ಸಹಾಯಕತೆಗಳ ಗೋಡೆಗಳನ್ನು ಒಡೆದು, ಜೀವ ಚೈತನ್ಯದ ಹೊಸಗಾಳಿ ಸುಳಿಯಬೇಕೆಂದು ಕವಿ ಸಹಜವಾದ ದುಃಖದಿಂದ ಈ ಅಪೇಕ್ಷೆ ಮಂಡಿತವಾಗುತ್ತದೆ.

ನವ್ಯ ಕಾವ್ಯದ ಆರಂಭದ ದಿನಗಳು ಅವು. ಆ ದಿನಗಳಲ್ಲಿ ದಕ್ಷಿಣ ಕನ್ನಡದಿಂದ ಹೊರಟ ಪ್ರಬುದ್ಧ ಧ್ವನಿ–ಯಮುರ್ನಂಜ.

ಇದಂ ರಾತ್ರಿ,
ನಾಳೆಯು ಭವಿಷ್ಯವನಂ ತೆರೆವ ಕರಿ ಬಾಗಿಲಂ
ಕಳೆದ ಕ್ಷಣಗಳ ನೆನಪು ಮರುಕಳಿಸಿ ಬಿಕ್ಕುತಿದೆ,
ಬಿಕ್ಕು ಮರಂಕಳಿಸುತಿದೆ

(ಚಂದ್ರಬಿಂಬ)

"ಅಹ, ಎಲ್ಲಿಂದ ಬಂದಿತೀ ತಂಗಾಳಿ?"...ಒಳಗಿನ ಜಟಿಲತೆಯಂನ್ನು ಅದರ ದ್ವಂದ್ವಾತ್ಮಕ ಸ್ವರೂಪವನ್ನು ಹುಡಂಕುತ್ತಾ ಕವಿತೆಯಾಗಿಸಂತ್ತಾ, ಹೆಚ್ಚು ಕಡಿಮೆ ಅಡಿಗರ ಹಾಗೆ ಬರೆಯುತ್ತಿದ್ದ ಕವಿ ಈತ. ಆದರೆ ಅವರ ಅತ್ಯುತ್ತಮ ಕವಿತೆಗಳು ಹಿಡಿಯಲಂ ಯತ್ನಿಸುವುದಂ ಯಾವುದೋ ನಿಗೂಢವನ್ನು.

ಇಂತಹ ಕವಿತೆಗಳನ್ನು ಬರೆಯಂವ ಸಮಯದಲ್ಲಿ ವೈಯಕ್ತಿಕ ಬದುಕಿನಲ್ಲಿ ಈ ಕವಿ ಬಳಲಿದ್ದರಂ. ತಿಂದ ಅನ್ನ ಯಾವುದೂ ಜೀರ್ಣವಾಗದ ವಿಚಿತ್ರ ಕಾಯಿಲೆ ಅದಂ, ಒಳಗೂ ಹೊರಗೂ ದಾಹದಿಂದ ಕುದಿಯಂತ್ತಿದ್ದ ಅದರೆ ಬರಿಗಣ್ಣಿಗೆ ಕಾಣಿಸದ 'ಸಾಲು ಸಾಲು ಸಾಲು ರೋಗಾಣು' ಗಳನ್ನು ಕಂಡು ಕಂಗೆಟ್ಟಿದ್ದರು ಅವರಂ.

ನಾಳೆ ಎಂತೋ ಏನೋ
ಸೂರ್ಯ ಮೂಡುವನೋ ಇಲ್ಲವೊ......

(ರೋಗಿಯ ಚಿಂತೆ)

ಎಚ್ಚರಾದರೆ ಸಾಕು ಅವಸರದಲ್ಲಿ ಕೈಯ ಹಿಂಬದಿಯಲ್ಲ ನಾಡಿ ಹುಡಂಕಿ ಜೀವಂತವಾಗಿರುವುದನ್ನು ಖಚಿತಪಡಿಸಿಕೊಳ್ಳುವಷ್ಟು ಆತಂಕ ಜೀವನದ ಪೆಂಡುಲಂ ಜೋಕಾಲಿ ಆಡುತ್ತಿರಂವಾಗ ಹೊರಗೆ ಬಂದು ಬಾಗಿಲು ಬಡಿಯುತ್ತಿರುವ ಸಾವು. ಒಂದು ರಾತ್ರಿ ಕಳೆದಂ ಬೆಳಗಾದರೆ ಎಂತಹ ಸಂತೋಷ!

ಕನಸನಳಿಸಿ ಮಂಂಜಾನೆಯ ಬೆಳಕ ತಂದೆ ಧೋಪರಾಕ್!
ಬೆಳ್ಳಿ ಕರಡಿಗೆಯಲ್ಲಿ ಬಿಳಿಯ ಬತ್ತಿಯಿಂದೆ ಹಾರಿಸು ಹೊಗೆ
............
ಹಾರು, ಕಂಣಿ, ಹಾಕು ಕೇಕೆ!

(ಜಾಗೃತಿ)

"ಸೊರಗಿ ಕಡ್ಡಿಯಂತಾದವರು ಮಳೆಗಾಲದ ಬಿಸಿಲಿನಂತೆ ನಗುತ್ತಾ ನಮಸ್ಕರಿಸಿದವರು"—ಯಮುರ್ನಂಜರ ಸ್ನೇಹಿತರೊಬ್ಬರು ಅವರನ್ನು ಕುರಿತು ಬರೆದ ಈ ಮಾತಂ

ಯಂವರ್ಣಂಜ ರಾಮಚಂದ್ರರ ಬದುಕು ಬರಹಗಳಿಗೆ ಒಡ್ಡಿದ ಸಮರ್ಥ ಪ್ರತಿಮೆಯಂತೆ ಭಾಸವಾಗುತ್ತದೆ. ಕಲ್ಪನೆ, ಚಂದ್ರಬಿಂಬ, ಕ್ಷೋಭೆ, ಜಾಗೃತಿ, ಯಾರಿಲ್ಲಿಗೆ ಬಂದರು ಕಳೆದಿರುಳು ಮೊದಲಾದ ಕವಿತೆಗಳಲ್ಲಿ ಆ ರೂಪ ಮತ್ತು ನಗು ಬೆರೆತ ಕವಿಯಾನಂ ಗಮನಿಸಬಹುದು.

ಅವರ ಕೊನೆಯ ಕವಿತೆ 'ಯಾರಿಲ್ಲಿಗೆ ಬಂದರು ಕಳೆದಿರುಳು' ನಿಗೂಢ ಅನುಭವವನ್ನು ಹೊತ್ತ ಕವಿತೆ,

"ನೆನೆ ನೆನೆದು ತನು ಪುಳುಕಗೊಳ್ಳುತಿದೆ
ನುಡಿವೆನೆ ದನಿ ನಡುಗುತಿದೆ
.........
ಮೈಯೆಲ್ಲಾ ಗಡಗುಟ್ಟುತಲಿದೆಯೇ
ಬೆದರಿಸಿದವರಾರು"

(ಯಾರಿಲ್ಲಿಗೆ ಬಂದರು ಕಳೆದಿರುಳು)

ತಮ್ಮ ಜೀವನದ ಅನಿಶ್ಚಿತಾವಸ್ಥೆಯಲ್ಲಿ ಕೂಡಾ ಸಾಕ್ಷಿಭಾವವನ್ನು ಉಳಿಸಿಕೊಂಡು ಬರೆಯುತ್ತಿದ್ದವರನ್ನು ನಡುಗಿಸಿದ್ದು ಯಾರು? ಕವಿಯಲ್ಲಿ ಪಿಸುಗುಟ್ಟಿದವರು ಯಾರು? ಅನುಭವದ ಅನೇಕ ಮೈಗಳನ್ನು ಹೊಂದಿದ ಈ ಕವಿತೆಯ ಪ್ರಬುದ್ಧತೆ ಪಡೆದ ಕವಿ ಇಪ್ಪತ್ತೆರಡರ ಕಿರುಹರೆಯದವನು ಎನ್ನುವುದನ್ನು ಮರೆಯಲಾಗದು. ಕವಿಗೆ ರಿಯಾಯಿತಿಯ ಅಗತ್ಯವಿಲ್ಲ. ಅನುಭವಕ್ಕೆ ತಕ್ಕ ಪ್ರತಿರೂಪಗಳನ್ನು ಭಾಷೆಯಲ್ಲಿ ಯೋಗ್ಯ ಪ್ರತಿಮೆಗಳ ಮೂಲಕ ಸಿದ್ಧತೆಗೊಳಿಸಬಲ್ಲ ನಿಜವಾದ ಕವಿ ಅವರಾಗಿದ್ದರು ಎಂದು ಅಡಿಗರು ಗುರುತಿಸಿರುವುದು ಸರಿ. ಆದರೂ ಅವರ ವಯಸ್ಸನ್ನು ಜೀವನವನ್ನು ಮರೆಯಲಾಗುವುದಿಲ್ಲ ಅಥವಾ ಈ ಕವಿತೆಗಳೇ ಅದನ್ನು ಮರೆಯದಂತೆ ಮಾಡಿಬಿಡುತ್ತವೆ ಅಂದರೆ ಹೆಚ್ಚು ಸರಿ.

ವಿದಾಯ ಸಂಕಲನದ ಕವಿತೆಗಳನ್ನು ಆಯ್ಕೆ ಮಾಡಿ ಅನುಕ್ರಮದಲ್ಲಿರಿಸಿದ ಅಡಿಗರು ಅವುಗಳ ಆತ್ಮ ಚರಿತ್ರಾತ್ಮಕ ಅಂಶಗಳನ್ನು ಗಮನಿಸಿದಂತೆ ತೋರುತ್ತದೆ. ವಿದಾಯ ಸಂಕಲನ ಕವಿಯ ಆತ್ಮಚರಿತ್ರೆಯಾಗಿ ಕೂಡಾ ನಮಗೆ ತಟ್ಟುತ್ತದೆ. ನಾನಿಲ್ಲಿ ಪ್ರಮುಖವಾಗಿ ಗುರುತಿಸಿರುವುದು ಅದನ್ನು.

ರಾಮಚಂದ್ರರ ಕಥಾ ಸಂಕಲನ 'ಚಿಕಿತ್ಸೆಯ ಹುಚ್ಚು ಮತ್ತು ಇತರ ಕಥೆಗಳು' ಸರಳವಾದ ಆದರೆ ನವ್ಯಕತೆಯ ತಂತ್ರಗಳನ್ನು ಮೈಗೂಡಿಸಿಕೊಂಡ ಕವಿತೆಗಳು ಇವು. ಇಲ್ಲೂ ಅಂತರಂಗ ಪ್ರಪಂಚ ಮತ್ತು ಸುತ್ತಲಿನ ಬದುಕು ಒಂದಾಗಿ ಬೆಸೆಯಲ್ಪಟ್ಟಿದೆ.

ದಕ್ಷಿಣ ಕನ್ನಡದ ವಿಶಿಷ್ಟ ವ್ಯಕ್ತಿತ್ವಗಳ ಪರಿಚಯು ನಮಗೆ ಈ ಸಂಕಲನದಿಂದ ಆಗುತ್ತದೆ. ಮಧ್ಯಮ ವರ್ಗದ ಅನುಭವಕ್ಕಾಗಿ ಕಾತರಿಸುವ ಅನುಭವದಲ್ಲಿ ಸಿಲುಕಲು ಆಸೆಪಡುವ ರೀತಿ ಮತ್ತು ಅನುಭವ ಮೈ ಪಡೆದು ಮಾಗುವ, ಅರಳುವ ಆರೋಗ್ಯವನ್ನು ಈ ಸಂಕಲನದ ಚೆನ್ನಪ್ಪ ಒಡೆದ ಮೂರ್ತಿಯಂಥಾ ಕತೆ ಪ್ರಸ್ತಾಪಿಸುತ್ತದೆ. ಈ ಸಂಕಲ ನದ ಬಗೆಗೆ ಪ್ರತ್ಯೇಕವಾದ ಲೇಖನವನ್ನೇ ಬರೆಯಬಹುದಾದ್ದರಿಂದ ಇಷ್ಟು ಮಾತ್ರ ಹೇಳಿ ಕೈಬಿಡುತ್ತೇನೆ.

ತಮ್ಮ ಆರನೆಯ ತರಗತಿಯಲ್ಲಿ 'ಬಾಲ ವಿಕಟ' ಪತ್ರಿಕೆಯನ್ನು ಸಂಪಾದಿಸಿದ ರಾಮಚಂದ್ರ ಹೈಸ್ಕೂಲ್ ದಿನಗಳಲ್ಲಿ ಮತ್ತು ಅನಂತರ 'ಪಾಂಚಜನ್ಯ' ಎಂಬ ನೂರು ಪುಟಗಳ ಕೈಬರೆಹದ ತಿಂಗಳ ಪತ್ರಿಕೆಯನ್ನು ನಡೆಸಿದರು. ಅವರ ಇನ್ನೊಬ್ಬ ಗೆಳೆಯ ಪಿ.ಎಸ್. ರಾಮ ಅವರೊಂದಿಗೆ ಸಂಪಾದಿಸಿದ ಈ ಪತ್ರಿಕೆಯಿಂದ, ರಾಮಚಂದ್ರರ ಸಾಹಿತ್ಯ ಪ್ರೇಮ, ಶ್ರಮ, ವಿಮರ್ಶನ ಪ್ರಜ್ಞೆ, ಕ್ಲಿಪೆಯಾಗಿರುವ 'ಪ್ರಚಲಿತಗಳ' ಬಗೆಗೆ ವ್ಯಕ್ತವಾಗುವ ವ್ಯಂಗ್ಯಗಳನ್ನು ಗುರುತಿಸಬಹುದು. ರಾಜಕೀಯ ಗ್ರಹಿಕೆಗಳ ಬಗೆಗೆ ಈ ಹಿಂದೆಯೇ ಪ್ರಸ್ತಾಪಿಸಲಾಗಿದೆ. ಭಾರತದ ವಿದೇಶ ನೀತಿ, ಆರ್ಥಿಕ ವಿಚಾರಗಳ ಬಗೆಗೂ ಸಂಪಾದಕೀಯಗಳನ್ನು ಬರೆದಿದ್ದಾರೆ.

> "ಮುಖ್ಯವಾಗಿ ಸಾಮಾನ್ಯ ಜನರ ಆವಶ್ಯಕ ವಸ್ತುಗಳ ಮೇಲೆಯೇ ಹೆಚ್ಚಿನ ಕರ ಹೇರುವುದರಿಂದ ಸರಕಾರದ ಯಶಸ್ಸು ಜನರ ಅವನತಿಯ ಮೇಲೆಯೇ ಹೊಂದಿಕೊಂಡಿದೆ,
>
> ಪಾಂಚಜನ್ಯ, ವಾರ್ಷಿಕ ಸಂಚಿಕೆ 1951

ಈ ಉದಾಹರಣೆ ಸಾಕಲ್ಲವೇ ?

ಜೀವನದ ಪ್ರತಿಯೊಂದು ಕಣಕಣವನ್ನು ಪ್ರೀತಿಸಿದ ಕವಿ ಯಮುನಾಂಜ ರಾಮ ಚಂದ್ರ ತಮ್ಮ ಸಂತ್ರಲಿನ ಬದುಕಿನ ಬಗೆಗೂ ಆತಂಕ ಪ್ರೀತಿ-ನಿರ್ಭೀತಿಗಳನ್ನು ಮೈ ಗೂಡಿಸಿಕೊಂಡಿದ್ದರು.

ಇಲ್ಲಿ ಯಮುನಾಂಜ ರಾಮಚಂದ್ರರವರ ವ್ಯಕ್ತಿತ್ವ-ಕಾವ್ಯಗಳನ್ನು ಪರಿಚಯಿಸುವ ಕೆಲಸವನ್ನು ಮಾತ್ರ ಮಾಡಲಾಗಿದೆ. ಅವನ್ನು ಓದಬೇಕೆಂದು ನಿಮಗನ್ನಿಸಿದರೆ ಈ ಕೆಲಸ ತೃಪ್ತಿದಾಯಕ. ಯಮುನಾಂಜರದೇ ಸಾಲುಗಳು ಮತ್ತೆ ಮತ್ತೆ ನೆನಪಾಗುತ್ತವೆ.

> "ಬಾಡುವ ಕುಸುಮದ ಎದೆಯಾಳದಿ
> ನವ ಚೈತನ್ಯದ ಬೀಜದ ರಚನೆ"

# ಪಾಟೀಲರ ಗದ್ಯದ ಮೂಲಕ... ನನ್ನ ಯೋಚನೆಗಳು

—ರಾಘವೇಂದ್ರ ಪಾಟೀಲ

ಕೆಲಸ ಬಿಟ್ಟರೆ ಶಹಬಾಸ್ ! ಹೊಟ್ಟೆಗೆ ತಣ್ಣೀರು ಬಟ್ಟೆ
ಕಟ್ಟಿ ಕೈಕಟ್ಟಿ ಕುಳಿತನೆ ವ್ಹಾರೆವಾ ! 'ಮೇರೆ ಸರದಾರ' ! ಬದುಕು
ಹುಡುಕಿ ಹೊರಟನೇ ಕೆಟ್ಟ ! ಛೀ ಛೀ ಉಂಟೆ, ಉಂಟೆ ? ನವಮಾದರ್ಶ
ಚಿತ್ರ ವಂಶುಕಾಗಬಹುದೇ ಹೀಗೆ ? ಈ ಅಸಾಮಾನ್ಯ ಈ ರೀತಿ
ಕೆಲಸಕ್ಕೆ ಕೈ ಹಚ್ಚಿ ಕೈಕೊಟ್ಟನಲ್ಲಾ ನಮಗೆ... ... ...

(ಮೂಲಕ ಮಹಾಶಯರು)

ಶ್ರೀ ಅಡಿಗರಂತಹ ಕವಿಯೊಬ್ಬರು ಈ ಸಾಲುಗಳನ್ನು ಬರೆಯುವಾಗ ಇರುವ ನಮ್ಮ ಸಾಂಸ್ಕೃತಿಕ ಪರಿಸ್ಥಿತಿ ಮತ್ತು ಈ ಪರಿಸ್ಥಿತಿಯ ಬೆಳವಣಿಗೆಯಲ್ಲಿ ಅಡಿಗರೂ ಸೇರಿ ನನ್ನ ಹಿಂದಿನ ತಲೆಮಾರಿನ ಲೇಖಕರ ಜವಾಬ್ದಾರಿ ಇವು ಇತ್ತೀಚೆಗೆ ಬರೆಯುತ್ತಿರುವ ನನ್ನ ಪಾರಗೆಯ ಲೇಖಕರಿಗೆ ಮುಖ್ಯವಾಗುತ್ತದೆ ಅಂದುಕೊಂಡಿದ್ದೇನೆ. ನನ್ನ ಹಿಂದಿನ ತಲೆಮಾರಿನ ಲೇಖಕರಿಗೆಲ್ಲ—ಪಾಟೀಲರನ್ನೂ ಸೇರಿಸಿ—ಗೋಪಾಲಕೃಷ್ಣ ಅಡಿಗರು ಬೇಕಾಗಿಯೋ ಬೇಡವಾಗಿಯೋ ಮುಖ್ಯರಾಗಿ ಉಳಿದಿದ್ದಾರೆ.

ಅಡಿಗರು ಇವರಿಗೆಲ್ಲ ಮಹತ್ವದವರಾದದ್ದು-ಇವರನ್ನು ಅವರು ಕಾಡಿಸಿದ್ದು ಇತ್ಯಾದಿಗಳೆಲ್ಲ ನನಗೆ ಮುಖ್ಯವಾದ ಘಟನೆಗಳಲ್ಲ. ಆದರೆ ಇಲ್ಲಿ ನಾನು ಗಮನಿಸಬೇಕಾಗಿರುವುದು – ಒಂದು ತಲೆಮಾರಿಗೆ ಒಂದು ವ್ಯಕ್ತಿ ಮುಖ್ಯವಾಗಿ ಕುಂತಲ್ಲಿ ನಿಂತಲ್ಲಿ ಅವನ ಗುಮ್ಮ ಇವರನ್ನು – ಇವರ ಗುಮ್ಮ ಅವರನ್ನು ಪರಸ್ಪರ ಕಾಡುವ ಸ್ಥಿತಿಯ ಸೃಜನಾತ್ಮಕ ಬರಡುತನವನ್ನು. ಒಬ್ಬ ವ್ಯಕ್ತಿಯ ಮೇಲೆ ನಮ್ಮೆಲ್ಲ ಭರವಸೆಗಳನ್ನು ಹೇರಿಕೊಂಡು – ಅವನು ಕೈಕೊಟ್ಟನೆಂದು ಅವನ ಹೆಸರು ಹಿಡಿದು ಅಳುತ್ತ ನಮ್ಮ ಸೃಷ್ಟಿಯ ಕ್ಷಣಗಳನ್ನು ಕಳೆದುಕೊಳ್ಳುವುದು ನನಗೆ ವಿಚಿತ್ರ ಭ್ರಮೆ ಅನಿಸುತ್ತದೆ.

ದ್ಮಿತ್ರಿ ಬ್ಲಗೊಯ್ ಎನ್ನುವ ರಶಿಯದ ಸಾಹಿತ್ಯ ವಿಮರ್ಶಕರೊಬ್ಬರು ಇತ್ತೀಚಿನ ಸಾಹಿತ್ಯ ಸಂದರ್ಭದ ಬಗೆಗೆ ಸೂಚಿಸುವ ಮಾತು ನನಗೆ ಸತ್ವಪೂರ್ಣ ಅನಿಸುತ್ತದೆ. '.......there is an excessive cult of the poet's

---

ರಾಘವೇಂದ್ರ ಪಾಟೀಲ್, ಜೀವಶಾಸ್ತ್ರ ಅಧ್ಯಾಪಕ, ಮಲ್ಲಾಡಿ ಹಳ್ಳಿ ಕಿರಿಯ ಕಾಲೇಜ್, ಮಲ್ಲಾಡಿಹಳ್ಳಿ-577 531.

personality at the moment' ದ್ಮಿತ್ರಿಯುವರು ಇದನ್ನು 'romantic cult of the poet' ಎಂದು ಕರೆಯುತ್ತಾರೆ, ಲಂಕೇಶರು ಹೇಳುವ ಮಾತು 'we staked too much on Adiga......' ದ್ಮಿತ್ರಿಯುವರು ಗುರುತಿಸಿದ ಮಾತನ್ನು ಸಮರ್ಥಿಸುತ್ತದೆ. ನವ್ಯ ಸಾಹಿತ್ಯ ತನ್ನನ್ನ ತಾನು ಸ್ಥಾಪಿಸಿಕೊಳ್ಳುವ ಸಂದರ್ಭದಲ್ಲಿ ಇಂತಹ ಅನಾರೋಗ್ಯಕಾರಕ poet cult ಗೆ ಕುಮ್ಮಕ್ಕು ಕೊಟ್ಟಿತು. ಅಥವಾ–ನವೋದಯ ಕಾಲದಲ್ಲಿಯೇ ಸುರುವಾಗಿದ್ದ ಇಂಥ ಧೋರಣೆಗೆ ಒಂದು ತಾತ್ವಿಕ ರೂಪ ಕೊಟ್ಟಿತು. ಈ cult ಇಂದಿಗೂ ಮುಂದುವರೆದು ನನ್ನ ಜೊತೆಗಿನ ಲೇಖಕರ ಸೃಜನಾತ್ಮಕ ನೆಲೆಯ ಮೇಲೆ ಖಂಡಿತವಾಗಿಯೂ ದುಷ್ಪರಿಣಾಮ ಬೀರುತ್ತಿದೆ.

ಮನ್ವಂತರ 2ರಲ್ಲಿ ಅಡಿಗರ 'ನೆಹರೂ ನಿವೃತ್ತರಾಗುವುದಿಲ್ಲ' ಕವನದ ಬಗೆಗಿನ ಶ್ರೀ ಕೀರ್ತಿನಾಥ ಕುರ್ತಕೋಟಿಯವರ ಟೀಕೆಗೆ ಲಂಕೇಶರು ಸಾಕಷ್ಟು ಖಾರವಾಗಿಯೇ ಪ್ರತಿಕ್ರಿಯಿಸುತ್ತಾರೆ. 'ವಿಮರ್ಶೆಯ ಹೆಸರಲ್ಲಿ ಬಂದಿರುವ ಶ್ರೀ ಕುರ್ತಕೋಟಿಯವರ ಬೇಜವಾಬ್ದಾರಿತನಗಳು ಹೊಸ ಸಾಹಿತ್ಯದ ತಮಾಷೆಗಳಲ್ಲಿ ಮುಖ್ಯವಾದುವುಗಳು' 'ಕುರ್ತಕೋಟಿಯವರ ಗೊಂದಲಗಳೆಲ್ಲ ಅವರು ಯಾವ ರೀತಿಯ ಸಾಹಿತ್ಯ ಪ್ರಜ್ಞೆಯನ್ನೂ ಹೊಂದದೇ ಇರುವುದರಿಂದ ಆರಂಭವಾಗುತ್ತವೆ' — 'ಕಾವ್ಯದ ಬಗೆಗೆ ಸಂಪೂರ್ಣ ಅಜ್ಞಾನವುಳ್ಳ ವಿಮರ್ಶಕ ಮಾತ್ರ ಕುರ್ತಕೋಟಿಯವರ ರೀತಿಯಲ್ಲಿ ಬರೆಯಬಲ್ಲ....' ಇತ್ಯಾದಿ. ಲಂಕೇಶರ ಇಡೀ ಪ್ರಬಂಧದಲ್ಲಿ ಚರ್ಚಿತವಾಗಿರುವ ವಿಷಯದ ತಾರ್ಕಿಕತೆಯ ಬಗೆಗೆ ನನಗೆ ಯಾವ ಸಂಶಯಗಳೂ ಇಲ್ಲ. ಲಂಕೇಶರ ಈ ವಾಕ್ಯಗಳಲ್ಲೆಲ್ಲ ಮೂಡಿ ಬಂದಿರುವ poet cult ನ ಧ್ವನಿಗಾಗಿ ಇವಗಳನ್ನು ಇಲ್ಲಿ ಉದ್ಧರಿಸಿದ್ದೇನೆ. ಹಾಗೆಯೇ ಪಾಟೀಲರೂ ಒಂದು ಕಡೆ ತಾವು ಅಡಿಗರ ಒಡೆತನದ ನಾಟಕ ಕಂಪನಿಯಲ್ಲಿ ಇದ್ದುದಾಗಿ ಹೇಳಿಕೊಂಡಿದ್ದಾರೆ. 'ಐವತ್ತರ ಅಡಿಗರು' ಕವನದಲ್ಲಿ–

ಬೆರಳು ಮೋಹನ ಮುರಲಿ ತೂತ ತೊರೆದು,
ಬೆರಳು ಕೈಯಾಗಿ
ಚಂಡೆ ಮದ್ದಳೆಗೊಮ್ಮೆ ಕೈ ಹಚ್ಚಿದಾಗ
ಗಾರುಡಿಗನ ಪುಂಗಿ
ಹಾವಿನ ಬುಟ್ಟಿಯಲ್ಲೇ ಮಂಗ ಮಾಯ.
ಮುಲ್ಲಾಡದ ಹಕ್ಕಿ ಹಾಡು
ಓ ಅದು ದೊಡ್ಡ ರಾಮಾಯಣ

('ಐವತ್ತರ ಅಡಿಗರು' – ಚಂಪಾ)

ನವ್ಯದ ಸಂದರ್ಭದ ಇನ್ನೊಂದು ಅನಾರೋಗ್ಯಕಾರಕ ಕೊಡುಗೆ ಎಂದರೆ ನಿಂದನಾತ್ಮಕ ಸಾಹಿತ್ಯ ರಚನೆ. ಸಾಹಿತ್ಯಕವಾದ ಭಿನ್ನತೆಗಳನ್ನು ವೈಯಕ್ತಿಕ ಲೇವಡಿಗಳಿಂದ ದಾಖಲಿಸುವ ನಿಂದನಾತ್ಮಕ ಸಾಹಿತ್ಯ ಪರಂಪರೆಗೆ ತೀರಹೊಸದು. ಇದು ನಿಶ್ಚಿತವಾಗಿ ನಾವು ನವ್ಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯ ಪ್ರಭಾವಗಳೊಂದಿಗೆ ಆಯಾತ ಮಾಡಿಕೊಂಡ 'ಫರಂಗಿ' ರೋಗ. ಅಡಿಗರು ಬರೆದ 'ಪುಷ್ಪಕವಿಯ ಪರಾಕು' ಮತ್ತು "ಸ್ನಾನ" ಕವಿತೆಗಳು ಈ ರೀತಿಯ ರೋಗಕ್ಕೆ ಕೊಟ್ಟ ಚಾಲನೆಗಳು. ನಂತರ ಬಂದ ಲಂಕೇಶರ "ಅಡಿಗರ ಅಭ್ಯಂಜನ", ಚಂಪಾರ "ಪಕ್ಷಾಂತರಿಗಳ ಸಮೂಹಗಾನ", "60 ರ ಅಡಿಗರ ಅಡಿಗ" "ಅಜಗಜ" 'ಎಲ್ಲಿದ್ದೀರಿ ಎಲ್ಲಿದ್ದೀರಿ' ಮುಂತಾದವುಗಳು ಈ ಪರಂಪರೆಯನ್ನು ಗಟ್ಟಿಗೊಳಿಸಿದವು. ಪಾಟೀಲರ "ನಳಕವಿಯ ಮಸ್ತಕಾಭಿಷೇಕ" ನಾಟಕ ನಮ್ಮ ಸಾಂಸ್ಕೃತಿಕ ಪರಿಸ್ಥಿತಿಯ ಅನಾರೋಗ್ಯವನ್ನು ನಾಟ್ಯೀಕರಿಸುವುದರೊಂದಿಗೆ ಅದರಲ್ಲಿ ಸ್ವತಃ ಭಾಗವಹಿಸುತ್ತದೆ,

ಅಡಿಗರು ಹುಟ್ಟುಹಾಕಿದ ಈ ರೀತಿ ಇಂದು ಭಸ್ಮಾಸುರವಾಗಿದೆ. ಇಂದು ಅಡಿಗರು "ಮೂಲಿಕ ಮಹಾಶಯರು" ಬರೆಯುತ್ತಾರೆ - ಮತ್ತು ಹೀಗೆ ಹೇಳುತ್ತಾರೆ. "ನನ್ನ ಅನುಭವ ಹೇಗೇ ಇರಲಿ, ನಾನು ಕಂಡ ಸತ್ಯ ಎಂಥದೇ ಇರಲಿ; ಬೇರೆ ಬೇರೆ ಅನುಭವಗಳನ್ನೂ ಕಾಣ್ಕೆಗಳನ್ನೂ, ಅಭಿಮತಗಳನ್ನೂ ಮನಃಪೂರ್ವಕವಾಗಿ ಗೌರವಿಸಿ ಮನ್ನಿಸುವ ಉದಾರ ಬುದ್ಧಿಯೇ ಪ್ರಜಾತಂತ್ರದ ತಾಯಿ ಬೇರು ಎನ್ನಬಹುದು. ತನಗಿಂತ ಬೇರೆಯಾದ ಅಭಿಪ್ರಾಯವನ್ನು ಇಟ್ಟುಕೊಂಡವರು, ಹೀಗೆ ತನಗಿಂತ ಭಿನ್ನರಾದವರನ್ನೆಲ್ಲ ಬೀಳ್ಗಳೆಯುವುದು, ಅವಹೇಳನ ಮಾಡುವುದು ಬಯ್ಯುವುದು–ಹೀಗಳೆಯುವುದು–ಪ್ರಜಾತಂತ್ರ ವಿರೋಧಿಯಾದ ಫ್ಯಾಸಿಸ್ಟ್ ಮನೋಭಾವದ ಮುಖ್ಯ ಲಕ್ಷಣ. ಆದಕಾರಣ ತಮ್ಮ ಕೈಗೆ ಸಿಕ್ಕಿದವರ ಕಣ್ಣು ಕಿತ್ತು ಕಾಲು ಮುರಿದು ಸಂತೋಷಪಡುವ ನಮ್ಮ ದೇಶದ, ಪೋಲೀಸರಂತೆಯೇ ಭಾಷೆಯನ್ನು ನಿರಪರಾಧಿಗಳ ಮೇಲೆ ಉಪಯೋಗಿಸಿ ಸಂತೋಷಪಡುವ ಲೇಖಕರು ನಮ್ಮಲ್ಲಿ ಇದ್ದಾರೆ. ಅಂಥವರ ಸಂಖ್ಯೆಯೇ ಬೆಳೆಯಬೇಕೆನ್ನುವ ಸರ್ವಾಧಿಕಾರ ಬುದ್ಧಿಯ ಅಪ್ರಬುದ್ಧ ಸಾಹಿತಿಗಳ ದೊಡ್ಡ ಪಟಾಲಮ್ಮೇ ಸಿದ್ಧವಾಗುತ್ತಿದೆ......"(ಸಾಕ್ಷಿ–41. ಸಂಪಾದಕೀಯ).

ಈ ಪರಿಸ್ಥಿತಿಯ ಉಗಮ–ಬೆಳವಣಿಗೆಗಳಿಗೆ ಅಡಿಗ–ಲಂಕೇಶ–ಅನಂತಮೂರ್ತಿ ಚಂದ್ರಶೇಖರ ಪಾಟೀಲರ ನೈತಿಕ ಜವಾಬ್ದಾರಿಯ ಬಗೆಗಿನ ಚರ್ಚೆಗಿಂತ–ಇಂದಿನ ಹೊಸ ಲೇಖಕರಾದ ನಾವು ಈ ಪರಿಸ್ಥಿತಿಗೆ ತೋರಿಸಬೇಕಾದ ಪ್ರತಿಕ್ರಿಯೆ ಮುಖ್ಯವಾಗುತ್ತದೆ. ನಮ್ಮ ಈ ಅನಾರೋಗ್ಯವನ್ನು ನಿವಾರಿಸಿಕೊಳ್ಳುತ್ತಲೇ. ನಮ್ಮ ಹಿಂದಿನವರು ಇಂಥ ಸಂದರ್ಭದಲ್ಲಿಯೇ ಕಟ್ಟಿದ ಸಾಹಿತ್ಯದ ಧನಾತ್ಮಕ ಮೌಲ್ಯಗಳಿಗೆ ನಾವು ಸ್ಪಂದಿಸಬೇಕಾಗಿದೆ.

ತುಂಬ ಇತ್ತೀಚೆಗೆ, ಸಾಕ್ಷಿ—41ರಲ್ಲಿ ಶ್ರೀ ರಾಮಚಂದ್ರಶರ್ಮರವರು 'ಈಚೆಗೆ ಕಾವ್ಯದ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಕೆಲವು ಬರಹಗಳನ್ನು ನೋಡಿದಾಗ ಕನ್ನಡ ಕಾವ್ಯ ತಾನಾಗಿಯೇ ಒಂದೆರಡು ವರ್ಷಗಳವರೆಗೆ ಮೌನವ್ರತವನ್ನು ಸ್ವೀಕರಿಸುವುದಾದರೆ ನೆಮ್ಮದಿ ಎಂದು ಕೆಲವರಿಗೆ ಅನ್ನಿಸುವುದು ಅನಿವಾರ್ಯ'—ಎನ್ನುತ್ತಾರೆ. ಈ ರೀತಿಯ ಧೋರಣೆ ತುಂಬ ವಿಚಿತ್ರದ್ದಾಗಿ ಕಾಣುತ್ತದೆ. ಒಂದಿಷ್ಟು ದಿನ ಬರೆಯದೇ–ತಾಲೀಮು ಮಾಡಿ–ಖೊಬ್ರಿ-ಖಾರೀತು-ಬಾದಾಮು ಮೇದು, ಆಮೇಲೆ ಒಮ್ಮೆಲೇ ಮಹತ್ವಪೂರ್ಣ ಕಾವ್ಯ ಬರೆಯಬಹುದು ಅನ್ನಲಿಕ್ಕೆ ಕಾವ್ಯವೇನು ಕುಸ್ತಿಯಾಟವೇ ? ಇಂಥ ಮಾತುಗಳು ಸಾಹಿತ್ಯ ಪರಂಪರೆಯಿಂದ ಕಾಲದ ನಿರಂತತೆಯನ್ನು ಗೌಣವಾಗಿ ಕಾಣುವ, ನಮ್ಮ ಕಾಲದ ಸೀಮಿತತೆಯನ್ನು ಅರಿಯದ ಅಹಂಕಾರದ್ದಾಗುತ್ತವೆ. ಆದರೆ ಇಂಥ ಮನೋಧರ್ಮದ ಮಾತುಗಳಿಗೂ ನಮ್ಮ ಇತ್ತೀಚಿನ ಸಾಹಿತ್ಯ ಪರಂಪರೆಯಲ್ಲಿಯೇ ಆಕರವಿದೆ. ಶ್ರೀ ಶರ್ಮರವರ ಇಂಥ ಮಾತುಗಳನ್ನು ನವ್ಯದ ಆರಂಭದ-ಬೆಳವಣಿಗೆಯ ಕಾಲದ ಲೇಖಕರು ಒಂದಿಲ್ಲ ಒಂದು ಹಂತದಲ್ಲಿ ಬಳಸಿಯೇ ಇದ್ದಾರೆ. ಬೇಂದ್ರೆ-ಕುವೆಂಪು ಮುಂತಾದ ನವೋದಯದ ಹಿರಿಯ ಬರಹಗಾರರು ಈ ರೀತಿಯ ಮಾತುಗಳಿಗೆ ಈಡಾಗಿದ್ದಾರೆ. ಕಾರವಾರದ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಚಂದ್ರಶೇಖರ ಪಾಟೀಲರು–ಕ್ರಿಯಾಶೀಲತೆ ಖಾಲಿಯಾದ ಇಂಥ ಹಂತದಲ್ಲಿ ಬೇಂದ್ರೆಯವರು ಇನ್ನು ಕಾವ್ಯ ಬರೆಯುವುದನ್ನು ನಿಲ್ಲಿಸಲು ಅಡ್ಡಿಯಿಲ್ಲ-ಎನ್ನುವ ಅರ್ಥದ ಮಾತುಗಳನ್ನು ಆಡಿದ್ದಾಗಿ ಹೇಳಿಕೊಂಡಿದ್ದಾರೆ.

## 2

ಲೇಖಕರ ವಿಶಿಷ್ಟ ಸಮಸ್ಯೆಗಳ ಪರಿಣಾಮವಾಗಿ ಕನ್ನಡ ಸಾಹಿತ್ಯದಲ್ಲಿ ನಡೆದ ಇನ್ನೊಂದು ಘಟನೆ, ಕರ್ನಾಟಕ ಬರಹಗಾರರ-ಕಲಾವಿದರ ಒಕ್ಕೂಟದ ಸ್ಥಾಪನೆ. ಕರಪತ್ರದಲ್ಲಿ ಸೂಚಿಸಲಾಗಿದ್ದ—ಮಾಧ್ಯಮಗಳನ್ನು ವೈದಿಕರ ಕಪಿಮುಷ್ಟಿಯಿಂದ ಬಿಡಿಸುವರು ಬಹು ಮುಖ್ಯವಾದ ಒಕ್ಕೂಟದ ಲೇಖಕರ ಸಮಸ್ಯೆಯಾಗಿತ್ತು ಅನಿಸುತ್ತದೆ. ಆ ಮಟ್ಟಿಗೆ ಅವರ ಸಾಧನೆಯೂ ಗಮನಿಸುವಂಥದು-ನೆಲಮನೆ ಪ್ರಕಾಶನ ಸಂಸ್ಥೆಯ ಸ್ಥಾಪನೆ-ಸಂಕ್ರಮಣ ಪ್ರಕಾಶನ ಸಂಸ್ಥೆಯ ಸ್ಥಾಪನೆ ಇತ್ಯಾದಿಗಳು (ಒಕ್ಕೂಟದ ಸ್ಥಾಪನೆಗೆ ಮೊದಲೇ 'ಸಂಕ್ರಮಣ' ಪತ್ರಿಕೆ ಬರುತ್ತಿತ್ತು)—ಇದು ಒಂದು ವ್ಯವಹಾರಿಕವಾದ ಸಾಧನೆ. ಈ ವ್ಯವಹಾರಿಕ ಸಾಧನೆಯನ್ನು ಬಿಟ್ಟು-ಒಕ್ಕೂಟದ ಪುರೋಹಿತ ಶಾಹಿಯ ವಿರುದ್ಧದ ಹೋರಾಟದ ಆಶಯ ಸಂಶಯಾತೀತವಾಗಿ ಬೆಳೆಯದೇ ಹೋಯಿತೇನೋ ಅನಿಸುತ್ತದೆ. ಭಿನ್ನ ಜಾತಿಗಳಿಗೆ ಸೇರಿದ ಲೇಖಕರೆಲ್ಲ ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲಿ ಮುಕ್ತವಾಗಿ ಭಾಗವಹಿಸಿದಂತೆ ಇಲ್ಲಿಯೂ ಯಾಕೆ ಅದು ಸಾಧ್ಯವಾಗಲಿಲ್ಲ ಎನ್ನುವ ಪ್ರಶ್ನೆ ನನ್ನನ್ನು ಕಾಡುತ್ತದೆ. ಒಕ್ಕೂಟದಲ್ಲಿರುವ, ಭಿನ್ನ

ಜಾತಿಗಳಿಗೆ—ಧರ್ಮಕ್ಕೆ ಸೇರಿರುವ ಸದಸ್ಯರುಗಳು ಆಯಾ ಧರ್ಮ-ಜಾತಿಗಳಲ್ಲಿನ ಪುರೋಹಿತಶಾಹಿಯ ವಿರುದ್ಧ ಹೋರಾಡುವರು ಎನ್ನುವ ಮಾತಾದರೆ-ಇದೇ ಮಾತನ್ನು ಬ್ರಾಹ್ಮಣರಿಗೂ ಅನ್ವಯಿಸಬಾರದು ಎಂದು ಶ್ರೀ ವೈಕುಂಠರಾಜುರವರು ಎತ್ತಿದ ಪ್ರಶ್ನೆ ಗೌಣವಾಗಲಾರದೆಂದುಕೊಳ್ಳುತ್ತೇನೆ. ಇಂದಿನ ರೈತ ಚಳುವಳಿಗಳಲ್ಲಿ ದೊಡ್ಡ ರೈತರೂ ಭಾಗವಹಿಸುವುದು ಒಂದು ತಾತ್ವಿಕ ಅನಿವಾರ್ಯ ಆಗುವದಾದರೆ–ಒಕ್ಕೂಟದಂತಹ ಸುಧಾರಣಾವಾದೀ ಲೇಖಕರ ಚಳುವಳಿಯು ಸಮಾಜದ ಒಂದು ಭಾಗದ ಲೇಖಕರನ್ನು ಸಾರಾಸಗಟಾಗಿ ಒಳಗೊಳ್ಳದೇ ಹೋಗುವುದು ಹೇಗೆ ಸಮಂಜಸವಾಗಬಹುದು? 'ತಮ್ಮ ತಮ್ಮ ಜಾತಿಯ ಜನರಿಗಿಂತಲೂ ಮನೋಧರ್ಮದಲ್ಲಿ ತಮಗೆ ಹತ್ತಿರವಾಗಿದ್ದ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಸಾಹಿತಿಗಳನ್ನು ಹಿಯಾಳಿಸುವುದರಲ್ಲಿ ತಮ್ಮ ಕಾಲಹರಣ ಮಾಡಬಾರದಾಗಿತ್ತು...' ಎಂದು ಅನಂತಮೂರ್ತಿಯವರಿಂದ ಮಾತು ಬರುವಂತಹ ಪರಿಸ್ಥಿತಿ ಮೂಡಬಾರದಾಗಿತ್ತು. Marxism ಯಾವಾಗಲೂ ತನ್ನ ವೈರಿಯನ್ನು define ಮಾಡಿಕೊಂಡು ತನ್ನ ಕ್ರಿಯಾಶಕ್ತಿಯನ್ನು ಸಂಯೋಜಿಸಿಕೊಳ್ಳುತ್ತದೆ. ಲೋಹಿಯಾವಾದದಿಂದ ಪ್ರಭಾವಿತರಾದ ಒಕ್ಕೂಟದವರೂ marxismನ ಈ ಕ್ರಿಯಾಶೈಲಿಯನ್ನೇ ಬಳಸಿಕೊಂಡರೇ ಎಂದು ನನ್ನ ಸಂಶಯ. ಯಾವದೇ ಸಮಾಜಿಕ ಬದಲಾವಣೆಯು ತನ್ನ ಪ್ರಕ್ರಿಯೆಯಲ್ಲಿ ಸಮಾಜದ ಒಂದು ಘಟಕವನ್ನು ಒಳಗೊಳ್ಳದಿದ್ದರೆ ಅದು ತಳಸ್ಪರ್ಶಿಯಾಗದೇನೋ? ಏಕೆಂದರೆ–ಧಿಃಕರಿತ ಘಟಕವು ನಾಳೆ ಇವರ ಇಂದಿನ ಕಾರಣಗಳಿಗಾಗಿಯೇ ಹೋರಾಟಕ್ಕೆ ಇಳಿಯುವ ಅವಕಾಶ ಇದರಿಂದ ನಿರ್ಮಿತವಾಗುತ್ತದೆ. ಅಲ್ಲದೇ ಇಂಥ ಪರಿಸ್ಥಿತಿ ಉಂಟಾದರೆ, ಧಿಃಕರಿತ ಜನಾಂಗದಲ್ಲಿನ ಪ್ರಗತಿಶೀಲ ಮನಸ್ಸುಗಳು ತೀವ್ರ ಭ್ರಮನಿರಸನಕ್ಕೆ ಒಳಗಾಗಿ ಪುರೋಹಿತಶಾಹೀ ವ್ಯವಸ್ಥೆಯೊಂದಿಗೆ ಸೇರಿಕೊಳ್ಳುವ ಅಪಾಯ ಉಂಟಾಗಬಹುದು.

ಇದಲ್ಲದೆ ಜಾತಿವಾದದ ಸಂಶಯವು ಸಾಹಿತ್ಯವಲಯದಲ್ಲಿ ಪ್ರವೇಶಿಸಿದ್ದಾದರೆ ಸಾಹಿತ್ಯ ಪರಂಪರೆಯ ಧನಾತ್ಮಕ ಚಲನಶೀಲತೆಗೆ ಪ್ರಮುಖ ಅಂಶವಾದ ವಿಮರ್ಶೆ ಪಾರ್ಶ್ವವಾಯು ಪೀಡಿತವಾಗುತ್ತದೆ. ಲೇಖಕ–ವಿಮರ್ಶಕರ ಜಾತಿಗಳಿಗೆ ಪ್ರಾಮುಖ್ಯತೆ ಬಂದರೆ ನಿಷ್ಪಕ್ಷಪಾತವಾದ ವಿಮರ್ಶೆ ಅಸಾಧ್ಯ ಎನ್ನಿಸುವ ಪರಿಸ್ಥಿತಿ ನಿರ್ಮಾಣವಾಗುತ್ತದೆ.—'ಗೋಕರ್ಣದ ಗೌಡಶಾನಿ' ಪ್ರಯೋಗವೊಂದರ ಬಗೆಗೆ ಹಿಂಗಮಿರೆಯವರು ಟೀಕಿಸಿ ಬರೆದಾಗ (ಅದು ಸರಿಯೋ ತಪ್ಪೋ ಎಂಬ ಪ್ರಶ್ನೆ ಬೇರೆ) ಚಂದ್ರಶೇಖರ ಪಾಟೀಲರು ಇಂಗ್ಲಿಷ/ಕನ್ನಡ ಪ್ರಾಧ್ಯಾಪಕರ ಗುಂಪುಗಾರಿಕೆಯ ಕಲ್ಪನೆಯ ಲಾಭ ಪಡೆದುಕೊಂಡು ಕನ್ನಡ ಪ್ರಾಧ್ಯಾಪಕರನ್ನೆಲ್ಲ ಹಿಯಾಳಿಸಿದರು. ಈ ಮೊದಲು ಅವರ 'ಮೂರು ನಾಟಕಗಳು' ಕುರಿತು ಕೀರ್ತಿಕೋಟಿಯವರು ಬರೆದಿದ್ದ ಪ್ರಜಾವಾಣಿಯ ವಿಮರ್ಶೆಗೆ ಪ್ರತಿಕ್ರಿಯೆ ವ್ಯಕ್ತಪಡಿಸುವಾಗ ಬ್ರಾಹ್ಮಣ-ಬ್ರಾಹ್ಮಣೇತರ ಗುಂಪುಗಾರಿಗೆ

ಅನುಕೂಲಕ್ಕೆ ಬಂದಿತ್ತು. ಟೀಕಿಸಿ ಬರೆದರೆ ಒಂದಿಲ್ಲ ಒಂದು ಗುಂಪುಗಾರಿಕೆಯ ಆರೋಪ ನಿಶ್ಚಿತ .... (ಗಿರಡ್ಡಿ ಗೋವಿಂದರಾಜ : ಸಾಹಿತ್ಯ ಮತ್ತು ಪರಂಪರೆ ಪುಟ-122. - ಬಿಕ್ಕಟ್ಟಿನಲ್ಲಿ ಕನ್ನಡ ವಿಮರ್ಶೆ).—"ಪ್ರಾಂಶಃ ಯಾವ ತತ್ವವಿಲ್ಲದ ಆದರೆ ಸಾಹಿತ್ಯದಲ್ಲಿ" ಯ ತಾತ್ವಿಕ ಭಿನ್ನಾಭಿಪ್ರಾಯಗಳನ್ನು 'ತನ್ನತನ' ವನ್ನು ಸಾಬೀತುಪಡಿಸಲು ಉಪಯೋಗಿಸಿಕೊಳ್ಳಲು ಹವಣಿಸುವ ಒಂದು ಗುಂಪು ಕಾಣಿಸಿ ಕೊಂಡಿದೆ .... .... ಈ 'ಗುಂಪು' ನಿರ್ಲಕ್ಷ್ಯಕ್ಕಲ್ಲದೇ ಬೇರೆ ಯಾವುದಕ್ಕೂ ಯೋಗ್ಯವಲ್ಲ." (ಮಾಧವ ಕುಲಕರ್ಣಿ : ತುಡಿತ : ಪುಟ-45 ವಿಮರ್ಶಕನ ಅಸ್ತವ್ಯಸ್ತ ಯೋಚನೆ ಗಳು.)— "ಈ ಕಾಲದಲ್ಲಿ ಸಲ್ಲುವುದಕ್ಕಾಗಿ ಅಥವಾ ತಾನು ಜಾತೀಯವಾದಿ ಅಲ್ಲವೆಂದು ಸ್ಥಾಪಿಸಿಕೊಳ್ಳುವುದಕ್ಕಾಗಿ ಎಷ್ಟೋ ಜನ ವಿಮರ್ಶಕರು ತಮ್ಮ ಜಾತಿ ಯವರನ್ನು ತೆಗಳಿ ಬೇರೆಯವರನ್ನು ಹೊಗಳಿದ್ದು ಇದೆ. ಅಥವಾ ಹೊಗಳಲೆಂದು ಮತ್ತು ತೆಗಳಲೆಂದು ಸಮ ಸಂಖ್ಯೆಯಲ್ಲಿ ಬ್ರಾಹ್ಮಣ ಮತ್ತು ಶೂದ್ರ ಲೇಖಕರನ್ನು ಆಯ್ದುಕೊಳ್ಳಲು ಪರದಾಡಿದ್ದಿದೆ ... ... ಸಾಹಿತ್ಯ ಕ್ಷೇತ್ರದಲ್ಲಿ ಹೀಗಾಗುವುದಕ್ಕಿಂತ ಹೆಚ್ಚು ಅಸಹ್ಯವಾದದ್ದು ಇನ್ನೇನೂ ಇಲ್ಲ." (ಅನಂತಮೂರ್ತಿ : ರುಜುವಾತು-1 ಪುಟ-116 ಸಂಪಾದಕನ ಟಿಪ್ಪಣಿಗಳು-ಜಾತಿ ಮತ್ತು ಸಾಹಿತ್ಯ.)— ಇಂಥ ಮಾತು ಗಳೆಲ್ಲ ಸಂಶಯದ ವಾತಾವರಣದಲ್ಲಿ ಮಾತ್ರ ಬರಲು ಸಾಧ್ಯವಾಗುತ್ತದೆ. ಇಂಥ ಸಂಶಯದ ವಾತಾವರಣವು 'ಮನೋಧರ್ಮದಲ್ಲಿ ಪರಸ್ಪರ ಹತ್ತಿರವಾಗಿರುವ' ಲೇಖಕರ ನಡುವೆ ಸೃಜನಶೀಲ ಸಂಬಂಧಗಳನ್ನು ಅಸಾಧ್ಯವಾಗಿಸಿ ಅನಾರೋಗ್ಯಕಾರಕ ವಾಗುತ್ತದೆ. ಈ ಹಿನ್ನಲೆಯಲ್ಲಿ ಬರೆಯಲು ಆರಂಭಿಸಿದ ಲೇಖಕರು ಅನಿವಾರ್ಯ ವಾಗಿ ಈ ಪರಿಸ್ಥಿತಿಯ ಸಾಧಕ ಬಾಧಕಗಳಿಗೆ ತಲೆಯೊಡ್ಡಬೇಕಾಗಿದೆ.

## 3

ಸೂಕ್ಷ್ಮ ಸಂವೇದನಾಶೀಲರಾದ ಶ್ರೀ ಚಂದ್ರಶೇಖರ ಪಾಟೀಲರು, ನಮ್ಮದ ಕಾಲಾವಧಿಯಿಂದಲೂ ರೂಪುಗೊಳ್ಳುತ್ತ ಬಂದಿರುವ ಈ ಪರಿಸ್ಥಿತಿಯಲ್ಲಿ ಕ್ರಿಯಾತ್ಮಕ ವಾಗಿ ಪಾಲುಗೊಳ್ಳುತ್ತ ಬಂದಿದ್ದಾರೆ. ಈ ಸಂದರ್ಭದಲ್ಲಿ ಉಂಟಾದ ಸ್ಥಿತ್ಯಂತರದ ಎಲ್ಲ ಹಂತಗಳಲ್ಲೂ ಅವರದು ಪ್ರಮುಖ ಧ್ವನಿಯಾಗಿ ಮಾರ್ದನಿಸಿದೆ. ಅದಕ್ಕೇ-ಅವರ ಭಾಷಣಗಳು - ಪತ್ರಗಳು – ಸಂಪಾದಕೀಯಗಳು ಮತ್ತು ಬಿಡಿಲೇಖನಗಳ ಬಗೆಗೆ ಯೋಚನೆ ಮಾಡತೊಡಗಿದಾಗ ಇಡೀ ಸಂದರ್ಭದ ಬಗೆಗೆ ಮತ್ತು ಈ ಸಂದರ್ಭದಲ್ಲಿ ಬರೆಯುತ್ತಿರುವ ನನ್ನಂತಹ ಇನ್ನೂ ಬೆಳೆಯುತ್ತಿರುವ ಲೇಖಕರ ಜವಾಬ್ದಾರಿಯ ಬಗೆಗೆ ಯೋಚಿಸುವ ಅವಶ್ಯಕತೆ ಬೀಳುತ್ತದೆ. ಪಾಟೀಲರ ಈ ಗದ್ಯದ ಇತಿಮಿತಿಗಳು ಇಂಥ ಈ ಇಡೀ ಹಿನ್ನಲೆಗೆ ಬದ್ಧವಾದಂಥವು.

ಚಂಪಾರ ಈ ರೀತಿಯ ಗದ್ಯ ಪ್ರಭೇದವು ಅನುಭವಿಸುವ ಮುಖ್ಯ ಮಿತಿ ಅಂದರೆ ತಾತ್ವಿಕ precipitation ಕ್ರಿಯೆಗೆ ಹೊರತಾಗುವುದು. ಬರವಣಿಗೆ ಮಾತಿನ ಮೋಡಿಗೆ-ಜಾಡಿಗೆ ಸರಿಹೊಂದಿಕೊಂಡು ಬಿಡುತ್ತದೆ. ಆದ್ದರಿಂದಲೇ ಬರವಣಿಗೆಯಲ್ಲಿ ಹಳಕುಗಟ್ಟುವ ಕ್ರಿಯೆ-ಸಾರೀಭವಿಸುವ ಕ್ರಿಯೆ ನಡೆಯುದೇ ಸ್ಥಾಯೀ ಆಗದೇ ಹೋಗುತ್ತದೆ. ಅವರೇ ಹೇಳಿಕೊಂಡಂತೆ - 'ದೊಡ್ಡವರೆನಿಸಿಕೊಂಡವರ ಭಾನಗಡಿ ಕಣ್ಣಿಗೆ ಬಿದ್ದಾಗ ನನಗೆ ಸಿಟ್ಟು ನೆತ್ತಿಗೇರುತ್ತದೆ. ನಾಲಗೆ ಕೊಂಕಾಗುತ್ತದೆ. ಪರಿಣಾಮವೇನಾದೀತೆಂಬ ಅರಿವು ಇಲ್ಲದೇ ಏನಾದರೂ ಮಾತು ಆಡಿಯೇ ಬಿಡುತ್ತೇನೆ. ಎರಡು ವರ್ಷಗಳಲ್ಲಿ ಪಬ್ಲಿಕ್ಕಿನಲ್ಲಿ ನಾನಾಡಿದ ಕೊಂಕಿಗೆ ಮಿತಿಯೇ ಇಲ್ಲ'. ಪಾಟೀಲರ ಪ್ರಾಮಾಣಿಕತೆಯ ಬಗೆಗೆ ಸಂಶಯವಿಲ್ಲ—ಆದರೆ ಆಡುವ ಮಾತು ಆವೇಶದ ರೀತಿ ಯಲ್ಲಿಯೇ ಅಭಿವ್ಯಕ್ತವಾದರೆ ಆ ಮಾತಿನ ಹಿಂದಿನ ಉದ್ದೇಶ ಕೊಂಕು-ವ್ಯಂಗ್ಯದ ಹಿಂದೆ ಮರೆಯಾಗಿ ಬರೀ ಕೊಂಕು ಮಾತ್ರ ಉಳಿಯುತ್ತದೆ.

ಕನ್ನಡ ವಿಮರ್ಶೆಗೆ ತುಂಬ original ಆಗಿರುವುದನ್ನು ಕೊಟ್ಟವರು ಲಂಕೇಶ್ ಮತ್ತು ಅನಂತಮೂರ್ತಿ - (ಖಾಸಗಿ ಮಾತುಕತೆ) ಎನ್ನುವ ಅನಿಸಿಕೆ ಹೊಂದಿರುವ ಪಾಟೀಲರು - 'ಒಂದೊಂದೇ ಪದರಗಳನ್ನು ಉಜ್ಜುತ್ತ ಹೋದಂತೆ ಕೊನೆಗೆ ಬಹುಶಃ ಏನೂ ಇರಲಾರದಂಥ ಉಳ್ಳಾಗಡ್ಡೆಯ ನಿರಾಕಾರ ವ್ಯಕ್ತಿತ್ವ ಅನಂತಮೂರ್ತಿಯವರ ದಾದರೆ, ಒಂದೇ ಕಾಲಕ್ಕೆ ಎಲ್ಲ ಮಗ್ಗುಲಗಳನ್ನೂ ಮಿಂಚುವ ಗೋಲಕದಂಥ ಬಹುಮುಖ ವ್ಯಕ್ತಿತ್ವ ಲಂಕೇಶರದು-ಕವಿಯಾಗಿ, ಕತೆಗಾರನಾಗಿ, ಕಾದಂಬರಿಕಾರನಾಗಿ, ವಿಮರ್ಶಕನಾಗಿ, ಪ್ರಬಂಧಕಾರನಾಗಿ, ನಟನಾಗಿ, ನಿರ್ದೇಶಕನಾಗಿ, ಪ್ರಾಧ್ಯಾಪಕನಾಗಿ, ಪತ್ರಿಕರ್ತನಾಗಿ, - ಹೀಗೆ ಮಾನಪತ್ರದ ಧಾಟಿ ಮುಂದುವರೆಸಿದರೆ.... ' ಎಂದು ಆವೇಶದಲ್ಲಿ ಬರೆಯುತ್ತಾರೆ. "ಒಂದು ಜನಾಂಗದ ಕಣ್ಣು ತೆರೆಯಿಸಿದ ಕವಿ" ಎಂದು ಅಡಿಗರನ್ನು ಕುರಿತು ಲಂಕೇಶ್ ಸಾರ್ವಕಾಲಿಕ ಸತ್ಯವನ್ನು ಸಾರದಿದ್ದರೂ ಸಮಕಾಲೀನ ಸಂದರ್ಭದಲ್ಲಿ ಅರ್ಥಪೂರ್ಣವಾಗಿ ಹೇಳಿದ್ದರು' ಅನ್ನುತ್ತಾರೆ. (-ಒಂದು ಜನಾಂಗದ ಬಗೆಗಿನ ಮಾತನ್ನು ಸಾರ್ವಕಾಲಿಕ ಸತ್ಯದ ಸಾಪೇಕ್ಷದಲ್ಲಿ ಗ್ರಹಿಸಲು ಹೇಗೆ ಸಾಧ್ಯ ವಾಗುತ್ತದೆ ? ಅಂಥ ಮಾತು ಆ ಜನಾಂಗಕ್ಕೆ ಮಾತ್ರ ಸೀಮಿತವಾದದ್ದು.)—'ನಾನು ಬ್ರಾಹ್ಮಣ್ಯ ಬಿಟ್ಟರೂ ಬ್ರಾಹ್ಮಣ್ಯ ನನ್ನನ್ನು ಬಿಡುವುದಿಲ್ಲ ಎಂದು ಸಾರಿ ಹೇಳಿದ ಅನಂತಮೂರ್ತಿಯವರು .... " ಎಂದು ಪಾತ್ರವೊಂದರ ಮಾತನ್ನು ಕಾದಂಬರಿಯ ಇಡೀ ಸಂದರ್ಭದಿಂದ ಕಿತ್ತಿ ತೆಗೆದು ತುಂಬ ಲಘುವಾಗಿ ಲೇಖಕನಿಗೆ ಜೋಡಿಸಿ ಬಿಡುತ್ತಾರೆ. 'ಸಾಕ್ಷಿ' ತೀರ ವಾಚ್ಯಾರ್ಥದಲ್ಲೂ 'ದ್ವಿಜ' ಪತ್ರಿಕೆ ಎಂದೂ-'ಬ್ರಾಹ್ಮಣರ ಸಮ್ಮೇಳನಗಳಿಗೂ ಅನಂತಮೂರ್ತಿಯವರ ರುಂಜುವಾತಿನ 'ಸಂಪಾದಕ ವರ್ಗ' ಕ್ಕೂ ತಳುಕು ಹಾಕಿದರೆ ಅದೊಂದು ಅಬ್ಸರ್ಡ್ ನಾಟಕವೆಂದು ಯಾರೂ ತಳ್ಳಿಹಾಕಬೇಕಾಗಿಲ್ಲ'

ಎನ್ನುತ್ತಾರೆ. ಬಂಡವಾಳಶಾಹಿ ಮನೋಧರ್ಮದವರಂತೆ - ಕೆ. ವಿ. ಸುಬ್ಬಣ್ಣನವರ ಬಂಡವಾಳ ಮತ್ತು ಪರಿಶ್ರಮದಿಂದ ಬೆಳಕು ಕಂಡರೂ 'ಸಾಕ್ಷಿ' ಗೆ ಸಂಪಾದಕತ್ವ ಮಾತ್ರ ಅಡಿಗರದು ! ಎಂದು ದಿಗಿಲು ಪಟ್ಟು ಉದ್ಗಾರ ತೆಗೆಯುತ್ತಾರೆ.

"ಸಾಹಿತ್ಯ ವಿಮರ್ಶೆಯು ಸತತಶ್ರಮದಿಂದ ಕೆಲವೇ ಕೆಲವರಿಗೆ ಮಾತ್ರ ಅರ್ಥಪೂರ್ಣರಾದ ಅಡಿಗರಂಥ ಕವಿಗಳನ್ನು ಒಂದು ಲಕ್ಷ ಜನರಾದರೂ ಓದುವ ಲಂಕೇಶ್ ಪತ್ರಿಕೆಯಲ್ಲಿ ಅಸಭ್ಯವೆನಿಸುವಂತೆ ಗೇಲಿ ಮಾಡುವುದು, ಬಂಡಾಯ ಸಾಹಿತ್ಯದ ಆಂದೋಳನಕ್ಕೆ ಆಕರ್ಷಿತರಾದ ಹಲವು ಎಳೆಯರಿಗೆ ನವ್ಯ ಸಾಹಿತ್ಯದ ಉತ್ಕೃಷ್ಟ ಕೃತಿಗಳನ್ನು ಪ್ರತಿಗಾಮಿ ಧೋರಣೆಯೆಂದು ಹೇಳಿ ಅವುಗಳ ಅಭ್ಯಾಸ ಅನಗತ್ಯವೆಂಬ ಹುಂಬತನವನ್ನು ಅವರಲ್ಲಿ ಬೆಳೆಸುವುದು ಸೃಜನಶೀಲತೆಗೇ ವಿರೋಧವಾದ ನಿಲುವುಗಳಾಗುತ್ತವೆ."—ಎನ್ನುವ ಅನಂತಮೂರ್ತಿಯವರ ಮಾತಿಗೆ – ಲಂಕೇಶ್ ಪತ್ರಿಕೆಯನ್ನು ಕನಿಷ್ಟ ಒಂದು ಲಕ್ಷ ಜನರಾದರೂ ಓದುತ್ತಾರಲ್ಲ ಎಂಬ ಸಂಕಟವು ಇವರಿಗಿದೆ ಎಂದು ಪ್ರತಿಕ್ರಿಯಿಸಿ ಬಿಡುತ್ತಾರೆ.

ಪಾಟೀಲರೇ ಹೇಳುತ್ತಾರೆ - ಹಾಸ್ಯ - ವಿಡಂಬನೆಗಳ ಬಿಸಿಗೆ ಚಂದ ಚಂದದ ಮೇಣದ ಗೊಂಬೆಗಳೇನೋ ಕರಗಿ ಹೋಗುತ್ತವೆ. ಆದರೆ ಹಾಸ್ಯ - ವಿಡಂಬನೆಗಳು ಒಂದು 'ಮಿತಿ' ಯನ್ನು ಮೀರಿದಾಗ, ನಾವು ಯಾವುದನ್ನು ನಾಮಾವಶೇಷ ಮಾಡಬೇಕೆನ್ನುತ್ತೇವೆಯೋ ಅದನ್ನು 'ಸಹ್ಯ' ವನ್ನಾಗಿ ಮಾಡಿಬಿಡುವ ಸಾಧ್ಯತೆಯೂ ಇದೆ,' ಹೌದು. ಪಾಟೀಲರ ಪ್ರಾಮಾಣಿಕವಾದ ನೋವು - ಶೋಷಣೆ ರಹಿತ ಪರಸ್ಪರ ಸಮಾನತೆಯು ಆಧಾರದ ಸಂಬಂಧಗಳ ಬಗೆಗಿನ ಪ್ರಾಮಾಣಿಕ ಆಶಯಗಳನ್ನು ಅವರ ಆವೇಶದ ಮಾತುಗಳಲ್ಲಿಯು ಕೊಂಕು ಮುಚ್ಚಿ ಹಾಕಿ ಬಿಡಬಾರದು. ಅದೂ ಅಲ್ಲದೇ, ಇದು 'ಅತಿ' ಆದರೆ, ನಮ್ಮ ನಮ್ಮ ವೈಯಕ್ತಿಕ ಕಾರಣಗಳಿಗಾಗಿ ಒಂದು ideology ಯನ್ನು ಉಪಯೋಗಿಸುತ್ತಿರುವ ಸಂಶಯ ಉಂಟಾಗುವ ಸಾಧ್ಯತೆ ಕೂಡ ಇದೆ. ಲಂಕೇಶರು ಗುರುತಿಸಿರುವಂತೆ – 'ಪಾಟೀಲರು ತೀರಾ ಸಣ್ಣ ವಿಷಯಗಳಿಗೆಲ್ಲ ರೇಗಾಡುತಾರೆ. ತೀರ ಬೇಗ ಜನರನ್ನು ತಮ್ಮ ಮೂಗಿನ ನೇರಕ್ಕೆ ಹೆಸರಿಸತೊಡಗುತ್ತಾರೆ. ಅನೇಕ ಸಲ ತಮಾಷೆಗೆ - ಹಟಕ್ಕೆ - ಕ್ಷುಲ್ಲಕ ಕಾರಣಗಳಿಗಾಗಿ ಪದ್ಯ ಬರೆಯುತ್ತಾರೆ.' (ಗಾಂಧೀ ಸ್ಮರಣೆ - ಹಿನ್ನುಡಿ).

ಪಾಟೀಲರ ಗದ್ಯದಲ್ಲಿ ಬಿಸಿ, ಅದು ಉಸಿರಾಡುತ್ತಿದೆ - ಚೀರಾಡಿ ಬೈದಾಡಿ ಜಗಳ ಮಾಡುತ್ತಿದೆ ಎನ್ನುವಂತಹ ಜೀವಂತಿಕೆ - ಇವುಗಳನ್ನು ಪ್ರೀತಿಸುವ ನನಗೆ, ಶ್ರೀ ಲಂಕೇಶರು ಅದೇ ಗಾಂಧೀಸ್ಮರಣೆ ಸಂಕಲನದ ಹಿನ್ನುಡಿಯಲ್ಲಿ ಪಾಟೀಲರ ಬರವಣಿಗೆ ಬಗೆಗೆ ಆಡುವ ಒಂದಿಷ್ಟು ಮಾತುಗಳನ್ನು ಇಲ್ಲಿ ದಾಖಲಿಸಬೇಕೆನಿಸುತ್ತದೆ.

"ಅಡಿಗರಾಗಲೀ, ಅನಂತಮೂರ್ತಿಯವರಾಗಲೀ, ನಾನಾಗಲೀ, ಪಾಟೀಲರಾಗಲೀ ನಾವೆಲ್ಲರೂ ಚಿಂತನಕಾರರೆಂದರೆ ಮಾರ್ಗದರ್ಶಕರು, ಮೂಡುವವರಲ್ಲ ಎಂಬ ಪರಂಪರೆಯಲ್ಲಿ ಬೆಳೆದವರು. ಆಡುವ ಮಾತು ಮಂತ್ರದ ಪರಿಣಾಮ ಬೀರಬಲ್ಲದು ಎಂಬ ಕಲ್ಪನೆಯಲ್ಲಿ ಬೆಳೆದವರು. ಇವೆರಡೂ ಇರಲಾರದು ಎಂಬ ಅನುಮಾನ ಕೂಡ ಇಟ್ಟುಕೊಂಡವರು. ಈ ಪರಂಪರೆಗೆ ಪ್ರತಿಕ್ರಿಯೆಗೊಳ್ಳುತ್ತಲೇ ರಾಜಕೀಯ ಮತ್ತು ವಿಜ್ಞಾನ ನಮ್ಮನ್ನು ಸುತ್ತುವರಿದ ಬಗ್ಗೆ ತಮ್ಮ ನೋವನ್ನು ಮಂಡಿಸುವ (ಪಾಟೀಲರ) ರೀತಿ ಪ್ರತಿಭಾಪೂರ್ಣವಾಗಿದೆ. ಅಷ್ಟೇ ಅಲ್ಲ ನಾವೆಲ್ಲ ಬಹಳ ಸಲ ಗುರುತಿಸಿ ಹೇಳಿದ ಒಳದಾರಿಗಳ ಬಗ್ಗೆ ಸೂಚನೆ ಕೊಡುತ್ತಾರೆ. ಕಾಡು ಹರಟೆಯಲ್ಲಿ ಮೋಕ್ಷದ ಕಲ್ಪನೆಯಲ್ಲಿ ಕ್ಷುಲ್ಲಕ ಮಾಯಾ ಮಂತ್ರಗಳಲ್ಲಿ ವ್ಯಾಮೋಹವರೆಯುವಂತೆಯೇ ತೀವ್ರಗಾಮಿ ರಾಜಕೀಯದ ಕನಸುಗಳಲ್ಲಿ ತಲೆ ತಪ್ಪಿಸಿಕೊಳ್ಳುವ ಜನರಿದ್ದಾರೆ. ಇವರೆಲ್ಲರ ಬಗ್ಗೆ ಪಾಟೀಲರು ಕ್ರುದ್ಧರಾಗಿದ್ದಾರೆ. ಆದರೆ ಒಂದನ್ನು ಮಾತ್ರ ಅವರು ಹೆಚ್ಚು ಹೆಚ್ಚು ಗಾಢವಾಗಿ ಚಿಂತಿಸಿ ಪಡೆಯಬೇಕಾಗಿದೆ. ಅದೇನೆಂದರೆ - ಆಲ್ಬರ್ಟ ಕಮೂ ತನ್ನ "ಪ್ಲೇಗ್" ನಲ್ಲಿ ಸೂಚಿಸಿದಂತೆ—ಪ್ಲೇಗಿನ ಬಗ್ಗೆ ಅಂದರೆ ಫ್ಯಾಸಿಸ್ಟ್ ಮನೋಧರ್ಮದ ಬಗ್ಗೆ ಕೋಪಗೊಂಡರೆ, ವ್ಯಂಗ್ಯವಾಡಿದರೆ, ತಮಾಷೆ ಮಾಡಿದರೆ, ದೈವೀದೃಷ್ಟಿ ಪಡೆದರೆ, ನಿರ್ಲಿಪ್ತನಾದರೆ ಸಾಲದು - ಗಾಢವಾಗಿ ಶ್ರದ್ಧೆಯುಳ್ಳ ವಸ್ತು ನಿಷ್ಠತೆ ಪಡೆಯಬೇಕು. ಅಂಥ ಶ್ರದ್ಧೆ ಮತ್ತು ಅಂಥ ನಿಷ್ಠೆ ಪಡೆದೊಡನೆ, ನಮ್ಮೆಲ್ಲರ ವ್ಯಥೆಯೂ ಒಂದೇ ಬಗೆಯದಾದ್ದರಿಂದ, ಪಾಟೀಲರಿಂದ ಭೇಡಿಸಿಕೊಂಡು ಕೆಲವರೂ ಅದರಲ್ಲಿ ಭಾಗಿಗಳಾಗುತ್ತಾರೆ."

[ ಗೆಳೆಯರೊಬ್ಬರು ಚಂಪಾರ ಬಗೆಗೆ ತರಬೇಕೆಂದಿದ್ದ ಪುಸ್ತಕಕ್ಕಾಗಿ ಬರೆದ ಈ ಲೇಖನ ಕಾರಣಾಂತರಗಳಿಂದ ಪುಸ್ತಕ ಪ್ರಕಟವಾಗಲಿಲ್ಲ.]

# ಕನ್ನಡ ಚಿತ್ರಗಳಲ್ಲಿ ಸ್ತ್ರೀ

—ಡಾ. ಅನುಪಮಾ ನಿರಂಜನ*

---

ಕನ್ನಡ ಚಲನಚಿತ್ರ ಉದ್ಯಮಕ್ಕೆ ಅರ್ಧ ಶತಮಾನ ತುಂಬಿದ್ದಕ್ಕೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿರುವ ಅತ್ಯಂತ ದುಬಾರಿ ಹೋಟೆಲ್ಲುಗಳಲ್ಲಿ ಒಂದಾದ ವಿಂಡ್ಸರ್ ಮ್ಯಾನರ್‌ನಲ್ಲಿ ನಡೆಸಿದ ವಿಚಾರಗೋಷ್ಠಿಯ ಸಂದರ್ಭದಲ್ಲಿ ಡಾ॥ ಅನುಪಮಾ ನಿರಂಜನ ಮತ್ತು ಶ್ರೀಮತಿ ವಿಜಯಾರವರು ಮಂಡಿಸಿದ ಪ್ರಬಂಧಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಪ್ರಕಟಿಸಲು ಅನುಮತಿ ಕೊಟ್ಟ ಇವರಿಬ್ಬರಿಗೂ ಶೂದ್ರ ಋಣಿಯಾಗಿದೆ. —ಸಂ.

---

ಒಂದು ಒಳ್ಳೆಯ ಚಲನಚಿತ್ರ ನೋಡಿದಾಗ ಅಥವಾ ಒಂದು ಒಳ್ಳೆಯ ಸಾಹಿತ್ಯ ಕೃತಿ ಓದಿದಾಗ ಮನಸ್ಸಿನ ವಿಕಾಸವಾಗಬೇಕು; ಜ್ಞಾನದ ಪರಿಧಿ ವಿಸ್ತರಿಸಬೇಕು. ಆದರೆ ನಮ್ಮ ಇಂದಿನ ಬಹುತೇಕ ಚಲನಚಿತ್ರಗಳನ್ನು ಗಮನಿಸಿದಾಗ ಈ ಉದ್ದೇಶ ವಿಫಲವಾಗುತ್ತಿದೆಯೆಂದೇ ಹೇಳಬಹುದು.

ಕನ್ನಡ ಚಲನಚಿತ್ರಗಳಲ್ಲಿ ಸ್ತ್ರೀಪಾತ್ರ ನಿರೂಪಣೆ ಹೇಗಿದೆ ಎಂಬುದನ್ನು ವಿಚಾರ ಮಾಡುವುದಕ್ಕೆ ಮುಂಚೆ, ನಮ್ಮ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ ಹೇಗಿದೆ ? ಅವಳ ಆಲೋಚನೆಗಳೇನು ? ಅವಳ ಜೀವನ ವಿಧಾನ ಹೇಗೆ? ಅವಳ ನಡವಳಿಕೆ, ಮಾತುಕತೆ, ವೇಷಭೂಷಣ ಇವೆಲ್ಲಾ ಹೇಗಿವೆ? ಎಂಬ ಹಿನ್ನೆಲೆಯಲ್ಲಿ ಯೋಚನೆ ಮಾಡಬೇಕಾಗುತ್ತದೆ. ಹಾಗೆ ಯೋಚನೆ ಮಾಡಿದಾಗ ವಾಸ್ತವ ಜಗತ್ತಿನಲ್ಲಿ ಇರುವ ಸ್ತ್ರೀಪಾತ್ರಗಳಿಗೂ ಸಿನಿಮಾದಲ್ಲಿನ ನಿರೂಪಣೆಗೂ ವ್ಯಾಪಕ ಅಂತರವಿದೆ ಎಂಬುದು ಅರಿವಾಗುತ್ತದೆ. ಅವಾಸ್ತವತೆಯ ಜೊತೆಗೆ ವೈವಿಧ್ಯವೇ ಇಲ್ಲದ, ಒಂದೇ ಬಗೆಯ ಸ್ತ್ರೀಪಾತ್ರಗಳನ್ನು ನಾವಿಲ್ಲಿ ಕಾಣುತ್ತಿದ್ದೇವೆ.

---

* ಶ್ರೀಮತಿ ಅನುಪಮಾ ನಿರಂಜನ, 515, 7ನೇ ಮೈನ್, 5ನೇ ಬ್ಲಾಕ್, ಜಯನಗರ, ಬೆಂಗಳೂರು - 560 011.

ಚಲನಚಿತ್ರದಲ್ಲಿ ಒಂದೋ ಸ್ತ್ರೀದೇವತೆಯಾಗಿರುತ್ತಾಳೆ ಇಲ್ಲವೇ ರಾಕ್ಷಸಿಯಾಗಿರುತ್ತಾಳೆ. ದೇವತೆ ಅಂದರೆ ಎಲ್ಲಾ ಒಳ್ಳೆಯ ಗುಣಗಳ ಖನಿ. ಅವಳು ರೂಪವಂತೆ ಮತ್ತು ವಿನಯಶೀಲೆ, ಮದುವೆಗೆ ಮುಂಚೆ ತನ್ನ ಪ್ರೇಮಿಯ ಜೊತೆ ಹಾಡು ಹೇಳಿಕೊಂಡು ಮರ ಸುತ್ತಬೇಕು. ವಿವಾಹದನಂತರ ದೇವರ ಮುಂದೆ ಕುಳಿತು ಭಕ್ತಿಗೀತೆ ಹೇಳಲು ಬರಬೇಕು. ಅನಂತರ ಗಂಡನಸೇವೆ ಮಾಡುವುದು, ಅವನಿಗೆ ವಿಧೇಯಳಾಗಿರುವುದು, ಮಕ್ಕಳಿಗೋಸ್ಕರ ತ್ಯಾಗ ಮಾಡುವುದು, ಇವೇ ಅವಳ ಬದುಕಿನ ಪರಮಗುರಿ. ಈ ದೇವತೆಗೆ ಸ್ವತಃ ತನ್ನದೇ ಆದ ವ್ಯಕ್ತಿತ್ವವಿರುವುದಿಲ್ಲ. ಗಂಡ-ಮಕ್ಕಳು ಹೇಳಿದ ಹಾಗೆ ಕುಣಿಯುವ ಸೂತ್ರದ ಗೊಂಬೆ ಆಕೆ. ಸಂಭಾಷಣೆಗಳಲ್ಲಂತೂ ದೈನ್ಯತೆಯೇ ಮೂರ್ತಿವೆತ್ತಂತಿದ್ದು ಅವಳು ಸಮಾಜದ ಎರಡನೆಯ ದರ್ಜೆಯ ಪ್ರಜೆ ಎಂಬುದು ಸಾಬೀತಾಗುತ್ತದೆ. ವೇಷಭೂಷಣಗಳಿಗೆ ಬಂದರಂತೂ ಮಧ್ಯಮವರ್ಗದ ಗೃಹಿಣಿ ಮನೆಗೆಲಸ ಮಾಡುವಾಗಲೂ ಜರೀ ಸೀರೆಯನ್ನೇ ಉಡುತ್ತಾಳೆ.

ಇಂಥ ಪಾತ್ರಗಳನ್ನು ನಿರ್ವಹಿಸಲು ನಟಿಗೆ ವಿಶೇಷ ಪ್ರತಿಭೆ ಬೇಕೇ ಇಲ್ಲ. ಎಲ್ಲಕ್ಕೂ ಒಂದೇ ಮುಖವಾಡ. ಸೀರೆ ಮಾತ್ರ ಬೇರೆ ಆಗಬಹುದು; ಒಡವೆ ಬೇರೆ ಇರಬಹುದು.

ನಿಜ ಜೀವನದಲ್ಲಿ ಪ್ರೀತಿ, ಪ್ರೇಮ, ಕ್ರೋಧ, ಮದ, ಮಾತ್ಸರ್ಯ ಮುಂತಾದ ಎಲ್ಲಾ ಗುಣಗಳು ಇರುವ ಮಾನವಳು. ಇಂಥ ಸಂಕೀರ್ಣ ಗುಣದ ಸ್ತ್ರೀ ನಮ್ಮ ಚಲನಚಿತ್ರಗಳಲ್ಲಿ ಯಾಕೆ ಕಾಣುವುದಿಲ್ಲ? ಬಹುಶಃ ಇಂಥ ವಾಸ್ತವ ಪಾತ್ರಗಳು ಜನಪ್ರಿಯತೆ ಪಡೆಯುವುದಿಲ್ಲ ಎಂಬ ಕಾರಣವಿರಬಹುದು. ದೈನಂದಿನ ಕಷ್ಟ ಕಾರ್ಪಣ್ಯಗಳಲ್ಲಿ ಬಳಲುವ ಸಾಮಾನ್ಯ ಜನರಿಗೆ ಬೇಕಾಗಿರುವುದು ಭ್ರಮಾಲೋಕ ಮತ್ತು ಜೀವನದ ವೈಭವೀಕರಣ ಎಂದು ಕಮರ್ಷಿಯಲ್ ಚಿತ್ರ ನಿರ್ಮಾಪಕರು ವಾದಿಸಿ ನಮ್ಮನ್ನು ದಿಕ್ಕುತಪ್ಪಿಸುವ ಅಪಾಯವಿದೆ. ಇಂಥ ಸ್ತ್ರೀಯನ್ನು ಚಿತ್ರಿಸುವ ಕೆಲವು ಹೊಸ ಅಲೆಯ ಚಿತ್ರಗಳು ಬಂದರೂ ಅಲ್ಲಿ ಸ್ತ್ರೀ ಪಾತ್ರಕ್ಕೆ ಹೆಚ್ಚು ಒತ್ತಿರಲಿಲ್ಲ ಎಂಬುದು ಗಮನಾರ್ಹ. ನಮ್ಮಲ್ಲಿ Hero oriented ಚಿತ್ರಗಳು ಬೇಕಾದಷ್ಟಿವೆ. Heroine Oriented ಸಿನಿಮಾ ತುಂಬಾ ಕಡಿಮೆ. ಪುಟ್ಟಣ್ಣ ಕಣಗಾಲರು ಮಾತ್ರ ಅಂಥ ಚಿತ್ರಗಳನ್ನು ಮಾಡುವ ಧೈರ್ಯ ತೋರಿದ್ದಾರೆ. ಈ ಇಳಿತಕ್ಕೆ ಕಾರಣ ಸಮಾಜದಲ್ಲಿ ಸ್ತ್ರೀಗೆ ಇರುವ ಸ್ಥಾನವೇ ಎಂಬುದನ್ನು ಮತ್ತೆ ವಿವರಿಸಬೇಕಾಗಿಲ್ಲ.

ಸಿನಿಮಾಗಳಲ್ಲಿ ಪ್ರಮುಖವಾಗಿ ಕಾಣುವ ಇನ್ನೊಂದು ಪಾತ್ರ ರಾಕ್ಷಸಿಯದು ಅಥವಾ ಕೆಟ್ಟ ಹೆಂಗಸಿನದು. ಸಿನಿಮಾ ಆದ್ದರಿಂದ ಇವಳು ಕುರೂಪಿಯಾಗಿರಲು ಸಾಧ್ಯವಿಲ್ಲ. ನೋಡಲು ಅಂದವಾಗಿದ್ದರೂ ಇವರು ದುಷ್ಟಗುಣಗಳ ಆಗರ. ಅಸೂಯೆ,

ಮೋಸ, ಹಿಂಸೆ, ಕ್ರೌರ್ಯ, ಕಾಮುಕತನ, ಇವೇ ಅವಳ ಗುಣಗಳು. ಸಾಮಾನ್ಯವಾಗಿ ಇವಳು ವೇಶ್ಯೆಯೋ, ಕ್ಯಾಬರೆ ನರ್ತಕಿಯೋ ಆಗಿರುತ್ತಾಳೆ. ಕೆಟ್ಟ ಗುಣಗಳ ಜೊತೆಗೆ ಅವಳು ಭೋಗ ವಸ್ತು ಎಂದು ಚಿತ್ರೀಕರಿಸಿ, ಆದಷ್ಟು ಕಡಿಮೆ ಬಟ್ಟೆ ಹಾಕಿ ಅವಳ ಅಂಗಾಂಗ ಪ್ರದರ್ಶನ ಮಾಡುತ್ತಾರೆ. ಇಂಥ ಒಂದು ಪಾತ್ರವನ್ನು ಕಂಡಾಗ ಮಗುವೊಂದು ತಾಯಿಯನ್ನು ಕೇಳಿದಂತೆ :

“ಅಮ್ಮ, ಅವಳ ಹತ್ರ ಲಂಗವಿಲ್ವ ? ಸೀರೆಯಿಲ್ವ ?”

ಮಗುವಿನ ಮೇಲೆ ಇಂಥ ಪರಿಣಾಮ ಮೂಡುವ ಈ ಪಾತ್ರ ಯುವಕರ ಮೇಲೆ ಮಾಡುವ ಮುಖ್ಯ ಪರಿಣಾಮ— ಕಾಮ ಪ್ರಚೋದನೆ. ಚಲನಚಿತ್ರಗಳಲ್ಲಿರುವ ಅಶ್ಲೀಲ ಸಂಭಾಷಣೆ ದ್ವಂದ್ವಾರ್ಥ ಬರುವ ಮಾತು, ಕೀಳು ಅಭಿರುಚಿಯ ಹಾಡುಗಳು (ಉದಾ : ಅಹ ಚಳಿ ಚಳಿ ಎಂಬ ಹಾಡು : ಒಬ್ಬನ್ನ ಕಟ್ಟಿದ್ದೆ, ಒಬ್ಬನ್ನ ಬಿಚ್ಚಿದ್ದೆ, ಒಬ್ಬನ್ನ ಕತಕೊಂಡು ಒಳಗ್ಹೋದೆ ಚೆಲುವಾ ಎಂಬೊಂದು ಗೀತೆ) ಇವೆಲ್ಲವೂ ಪ್ರೇಕ್ಷಕರನ್ನು ಯಾವ ದಾರಿಗೆಳೆಯುತ್ತದೆ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಹೆಣ್ಣನ್ನು ಈ ರೀತಿ ಚಲನಚಿತ್ರ ಮಾಧ್ಯಮದಲ್ಲಿ ಬಳಸಿಕೊಳ್ಳುವುದು ಇನ್ನೊಂದು ಮುಖ.

ಇಷ್ಟು ಸಾಲದೆಂಬಂತೆ ಚಿತ್ರಗಳಲ್ಲಿ ಹೆಣ್ಣಾಗುವ ಮಾನಭಂಗ, ಅತ್ಯಾಚಾರ, ಹಿಂಸಾಚಾರ, ಇವು ಜಾಸ್ತಿಯಾಗುತ್ತಿವೆ. ಇವು ಹೆಚ್ಚಾದಷ್ಟು ಆ ಚಿತ್ರ ಜನಪ್ರಿಯವಾಗುತ್ತದೆ. ಇದು ಗಂಡಾಂತರ ಬೆಳವಣಿಗೆ ಯಾಕೆಂದರೆ ನಿಜ ಜೀವನದಲ್ಲಿ ಘಟಿಸುವ ಅನೇಕ ಅತ್ಯಾಚಾರಗಳಿಗೆ ಇಂಥ ಚಲನಚಿತ್ರಗಳೇ ಸ್ಫೂರ್ತಿಯಾಗಿವೆ.

ಆರಂಭದ ಕನ್ನಡ ಚಿತ್ರಗಳಲ್ಲಿ (ಸತೀ ಸುಲೋಚನಾ, ಸಂಸಾರ ನೌಕೆ, ಜೀವನ ನಾಟಕ, ವಸಂತ ಸೇನಾ ಮುಂತಾದುವು) ಇಂಥ ಅತ್ಯಾಚಾರ, ಹಿಂಸಾಚಾರಗಳ ಸುಳಿವೇ ಇರಲಿಲ್ಲ. ವಸಂತಸೇನೆಯಂಥ ಕತೆಯಲ್ಲೂ ಕಾಮಪ್ರಚೋದನೆಯ ಯಾವ ದೃಶ್ಯವೂ ಇಲ್ಲದ ಅತ್ಯಂತ ಸಂಯಮದ ನಿರ್ದೇಶನವಿದೆ. ಅವುಗಳಲ್ಲಿ ವ್ಯಕ್ತಿಯ ನೈತಿಕ ಮೌಲ್ಯಗಳನ್ನು ಉನ್ನತಿಗೇರಿಸುವ ಉದ್ದೇಶವಿದ್ದರೆ, ಇಂದಿನ ಚಿತ್ರಗಳಲ್ಲಿ ಅನೈತಿಕ ಮೌಲ್ಯಗಳನ್ನು ಹೆಚ್ಚಿಸುವ ಹೊಂಚಿದೆ. ಹಿಂಸಾಚಾರ ನಮ್ಮ ಚಿತ್ರಗಳಲ್ಲಿ ಕಾಲಿರಿಸಿದ್ದು ಹೇಗೆ? ಪಾಶ್ಚಿಮಾತ್ಯ ಚಿತ್ರಗಳ ಅನುಕರಣೆಯಿಂದ ಹಿಂದಿ ಚಿತ್ರಗಳಲ್ಲಿ ಈ ಅಂಶ ಹೆಚ್ಚಾದಾಗ ಅದು ಕನ್ನಡ ಚಿತ್ರಗಳಲ್ಲೂ ಧಾರಾಳವಾಗಿ ಹೆಜ್ಜೆಯಿಟ್ಟಿತು.

ತೆಲುಗು, ತಮಿಳು, ಮಲಿಯಾಳಂ ಭಾಷೆಗಳಲ್ಲಿ ಅನೇಕ ಲೈಂಗಿಕ ಚಿತ್ರಗಳು ಬಿಡುಗಡೆಯಾದವು. ಪುಣ್ಯವಶಾತ್ ಕನ್ನಡದಲ್ಲಿ ಅಂಥ Blue Films ಬರಲಿಲ್ಲ. ಆದರೆ

ಅಂಥ ದೃಶ್ಯಾವಳಿಗಳನ್ನು ಕಮರ್ಷಿಯಲ್ ಚಿತ್ರಗಳಿಗೆಲ್ಲಾ ಹಂಚಿದ್ದಾರೋ? ಎಂಬ ಗುಮಾನಿ ಬರುತ್ತದೆ.

ಹೆಣ್ಣಿನ ಅಂಗಾಂಗ ಪ್ರದರ್ಶಿಸುವ ಕೀಳು ಅಭಿರುಚಿಯ ಭಿತ್ತಿ ಚಿತ್ರಗಳನ್ನು ಕಂಡಾಗ ಈ ಸಮಾಜದಲ್ಲಿ ಹೆಣ್ಣಿಗೆ ಮರ್ಯಾದೆಯಿಲ್ಲವೆ? ಗೌರವವಿಲ್ಲವೆ? ಎಂಬ ಕಳವಳ ಮೂಡುತ್ತದೆ. ಭಿತ್ತಿ ಚಿತ್ರಗಳಲ್ಲಿರುವ ದೃಶ್ಯ ವಾಸ್ತವವಾಗಿ ಸಿನಿಮಾದಲ್ಲಿರುವುದೇ ಇಲ್ಲ. ಇಂಥ ಆಕ್ಷೇಪಾರ್ಹ ದೃಶ್ಯಗಳನ್ನು ಸೆನ್ಸಾರ್‌ನವರು ಹೇಗೆ ಬಿಡುತ್ತಾರೆ? ಎಂಬುದೂ ಕೂಡ ಆಶ್ಚರ್ಯದ ಸಂಗತಿ.

ಸೆನ್ಸಾರ್ ಎಂಬ ಪದಕ್ಕೆ ಪರಿಶೀಲನಾ ಸಮಿತಿ ಎಂದು ಇರಬಹುದೇನೋ ಯಾಕೆಂದರೆ ಪತ್ರಿಕಾ ಸೆನ್ಸಾರ್‌ಷಿಪ್ ನಮ್ಮ ನೆನಪಿಗೆ ಬರುತ್ತದೆ. ಪರಿಶೀಲನಾ ಸಮಿತಿಯಲ್ಲಿ ಭ್ರಷ್ಟರಾಜಕಾರಣಿಗಳ ಬದಲಿಗೆ ಸಮಾಜದ ವಿವಿಧಕ್ಷೇತ್ರಗಳ ತಜ್ಞರಿರಬೇಕು; ಮನೋವಿಜ್ಞಾನಿ, ಸಮಾಜಶಾಸ್ತ್ರಜ್ಞ, ಭಾಷಾಶಾಸ್ತ್ರಜ್ಞರು, ಇಂಥವರಿದ್ದರೆ ಸ್ತ್ರೀಗೆ ಹೆಚ್ಚು ನ್ಯಾಯ ಸಿಗಬಹುದು.

ಇಂಥ ಅವಾಸ್ತವ ಕನ್ನಡ ಚಿತ್ರಗಳು ಪ್ರೇಕ್ಷಕರ ಮೇಲೆ ಎಂಥ ಪರಿಣಾಮ ಬೀರುತ್ತಿವೆ? ಎಂಬುದರ ಬಗ್ಗೆಯೂ ನಾವೀಗ ಆಲೋಚಿಸಬೇಕು.

ಸ್ತ್ರೀ ದೇವತೆ ಇಲ್ಲವೇ ರಾಕ್ಷಸಿ ಇಲ್ಲವೇ ಮೂರ್ಖಳು, ಬುದ್ಧಿಹೀನಳು ಅಂತಲೆ ಮುಂತಾಗಿ ಈ ಚಿತ್ರಗಳು ಮನದಟ್ಟುಮಾಡುವುದರಿಂದ ಅವು ಪ್ರೇಕ್ಷಕರನ್ನು ದಾರಿ ತಪ್ಪಿಸುತ್ತವೆ. ಸ್ತ್ರೀ ಗೇಲಿಯ ವಸ್ತುವಾಗಿರುವುದರಿಂದ ಅವಳಲ್ಲಿ ಯಾರಿಗೂ ಗೌರವ ಭಾವನೆ ಮೂಡುವುದಿಲ್ಲ. ಮಾತ್ರವಲ್ಲದೆ ಇದರಿಂದಾಗಿ ಅವಳ ಆತ್ಮವಿಶ್ವಾಸ ನಾಶವಾಗುತ್ತದೆ. ಇಂದಿನ ಚಿತ್ರಗಳು ಒಂದು ಬಗೆಯ ಭ್ರಮಾಲೋಕವನ್ನೇ ಸೃಷ್ಟಿಸಿ ಯುವತಿಯರ ಮಾನಸಿಕ ವಿಭ್ರಮೆಗೂ ಕಾರಣವಾಗುತ್ತಿವೆ. ಉದಾಹರಣೆಗೆ ಸಿನಿಮಾದಲ್ಲಿ ಹಾಡು ಹೇಳಿಕೊಂಡು ಮರ ಸುತ್ತುವ ಪ್ರೇಮಿಗಳನ್ನು ಕಂಡ ತರುಣಿ ನಿಜ ಜೀವನದಲ್ಲಿ ಹಾಗೆ ಹಾಡು ಹೇಳಲಾಗುವುದಿಲ್ಲ ಎಂಬ ವಾಸ್ತವಕ್ಕೆ ಬಂದಾಗ ದಿಗ್ಭ್ರಮೆಗೊಳ್ಳುತ್ತಾಳೆ. ಜೀವನದ ವಾಸ್ತವತೆಯನ್ನು ಇದಿರಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾಳೆ.

ಸ್ತ್ರೀ ಪ್ರೇಕ್ಷಕರ ಗತಿ ಹೀಗಾದರೆ, ಯುವಜನಾಂಗದ ಪಾಡು ಬೇಡವೇ ಬೇಡ. ಅವರನ್ನು ಸನ್ಮಾರ್ಗಕ್ಕೆ ಹಚ್ಚುವ ಬದಲು ದುರ್ಮಾರ್ಗಕ್ಕೆ ಎಳೆಯುತ್ತದೆ. ಜನರಲ್ಲಿ ವೈಚಾರಿಕತೆ ಬೆಳೆಯುವ ಬದಲು ಹೀನ ಅಭಿರುಚಿ ಬೆಳೆದು ಅವರ ನೈತಿಕ ಅವನತಿಯ ಹಾದಿ ಹಿಡಿಯುವಂತೆ ಮಾಡುತ್ತದೆ. ಹೀಗೆಂದರೆ ಕನ್ನಡದಲ್ಲಿ ಸ್ತ್ರೀ ಪಾತ್ರದ ಬಗ್ಗೆ ಕಾಳಜಿ ಇರುವ ಚಿತ್ರಗಳು ಬಂದೇ ಇಲ್ಲ ಎಂದು ಅರ್ಥವಲ್ಲ. ಆದರೆ ಅವು ಬೆರಳೆಣಿಕೆ

ಮಾತ್ರ ಕಾಣಸಿಗುವಂತಹವು. ಇಂಥ ಕಲಾತ್ಮಕ ವಾಸ್ತವ ಚಿತ್ರಗಳು ಜಾಸ್ತಿಯಾಗ ಬೇಕು.

ಚಲನಚಿತ್ರ ಅತ್ಯಂತ ಜನಪ್ರಿಯ ಮಾಧ್ಯಮ. ಇದು ಬರೀ ಮನರಂಜನೆ ನೀಡಿ ದರೆ ಸಾಲದು. ಅದು ಒಳ್ಳೆಯ ಶೈಕ್ಷಣಿಕ ಮಾಧ್ಯಮವು ಆಗಬೇಕು. ಅಂತಹದರಲ್ಲಿ ಬರೀ ಗಲ್ಲಾ ಪೆಟ್ಟಿಗೆ ತುಂಬಲೆಂದೇ ಚಿತ್ರಮಾಡುವ ನಿರ್ಮಾಪಕರು ಸ್ತ್ರೀಯ ಪಾತ್ರ ನಿರೂಪಣೆ ಹೀಗಾಗಲು ಕಾರಣರೆ ? ಅಥವಾ ಅಂಥವರ ತಾಳಕ್ಕೆ ತಕ್ಕ ಹಾಗೆ ಕುಣಿ ಯುವ ನಿರ್ದೇಶಕರೆ ? ಕೀರ್ತಿ ಮತ್ತು ಹಣಕ್ಕಾಗಿ ಏನನ್ನು ಬೇಕಾದರೂ ತ್ಯಾಗ ಮಾಡ ಬಲ್ಲ ನಟಿಯರೆ ? ಭ್ರಮಾಲೋಕದ ಕತೆಗಳನ್ನು ಸೃಷ್ಟಿಸುತ್ತಿರುವ ಲೇಖಕ, ಲೇಖಿಕ ಯರೆ? ಅಭಿರುಚಿಯೇ ಇಲ್ಲದ ಪ್ರೇಕ್ಷಕರೆ ? ಯಾವುದಕ್ಕೂ ಪ್ರತಿಭಟಿಸದೆ ಬಾಯಿ ಮುಚ್ಚಿ ಕುಳಿತಿರುವ ಸ್ತ್ರೀ ಸಮೂಹವೆ ? ಬಹುಶಃ ಎಲ್ಲರೂ ಕಾರಣ ಅನಿಸುತ್ತದೆ.

ಕನ್ನಡ ಚಲನಚಿತ್ರ ಬೆಳೆದುಬಂದ ಈ ಐವತ್ತು ವರ್ಷಗಳನ್ನು ಗಮನಿಸಿದಾಗ ಚಿತ್ರಗಳ ಗುಣಮಟ್ಟ ಮತ್ತು ನೈತಿಕ ಮಟ್ಟ (ಚಿತ್ರಗಳಲ್ಲಿ) ದಿನೇ ದಿನೇ ಕುಸಿಯುತ್ತಿರು ವುದು ಕಾಣುತ್ತದೆ. ಇದನ್ನು ಉತ್ತಮ ಪಡಿಸಲು ಕಮರ್ಷಿಯಲ್ ಚಿತ್ರನಿರ್ಮಾಪಕ ಎಂದೂ ಶ್ರಮಿಸಲಾರ. ಯಾಕೆಂದರೆ ಪ್ರೇಕ್ಷಕರಲ್ಲಿ ಕೆಟ್ಟ ಚಿತ್ರನೋಡುವ ಚಪಲ ಹುಟ್ಟಿ ಸಿದವನು ಇವನೇ; ಆತನ ಕಣ್ಣು ಹಣದ ಕಡೆಗೆ—ಕಲೆಯ ಕಡೆಗಲ್ಲ. ಆದ್ದರಿಂದ ಕಲಾತ್ಮಕ—ವಾಸ್ತವಿಕ ಚಿತ್ರಗಳು ಬರಬೇಕಾದರೆ, ಸಾಮಾಜಿಕ ಜವಾಬ್ದಾರಿ ಇರುವ ನಿರ್ಮಾಪಕರಿಂದ ಮಾತ್ರ ಸಾಧ್ಯ. ಅಂತಹವರಿಂದಲೇ 'ಸಂಸ್ಕಾರ' 'ಘಟಶ್ರಾದ್ಧ' 'ಫಣಿಯಮ್ಮ' ಮುಂತಾದ ಒಳ್ಳೆಯ ಚಿತ್ರಗಳು ಬಂದಿವೆ. ಇವರು ಮಾತ್ರ ಪ್ರೇಕ್ಷಕ ರಲ್ಲಿ ಸದಭಿರುಚಿಯನ್ನು ಮೂಡಿಸುವ ಆಶಾಕಿರಣವಾಗಿದ್ದಾರೆ. ಇಂಥ ನಿರ್ಮಾಪಕ— ನಿರ್ದೇಶಕರಿಗೆ ಪ್ರೋತ್ಸಾಹ ಮಾತ್ರವಲ್ಲ, ಸರ್ಕಾರದಿಂದಲೂ ಎಲ್ಲಾ ರೀತಿಯ ನೆರವು ಕೊಡಬೇಕು.

ಸ್ತ್ರೀಯರ ಬಗ್ಗೆ ಅನುಕಂಪ ಮತ್ತು ಗೌರವ ಇರುವ ನಿರ್ದೇಶಕರು ಒಳ್ಳೆಯ ಕತೆಗಳನ್ನು ಆಯ್ದು ಪ್ರಭಾವಶಾಲಿಯಾಗಿ ನಿರೂಪಿಸಬಲ್ಲರು. ಈ ದಿಸೆಯಲ್ಲಿ ಸ್ತ್ರೀ ನಿರ್ದೇಶಕರು ಹೆಚ್ಚು ಸಂಖ್ಯೆಯಲ್ಲಿ ಈ ವೃತ್ತಿಗಿಳಿಯಬೇಕು. ಅಪರ್ಣಾ ಸೇನ್, ಸಾಯಿ ಪರಾಂಜಪೆ ಮತ್ತು ಪ್ರೇಮಾ ಕಾರಾಂತರು ನಮಗೆ ಮುಖ್ಯರಾಗುವುದು ಇಲ್ಲೀ.

ಹಣದ ಆಸೆಗೆ ಮತ್ತು ಕೀಳು ದರ್ಜೆಯ ಪ್ರಸಿದ್ಧಿಗೆ ಅರೆನಗ್ನ ಚಿತ್ರೀಕರಣಕ್ಕೆ ನಟಿಯರು ಒಪ್ಪಲೇಬಾರದು. ತನ್ನ ಅಂಗಾಂಗ ಪ್ರದರ್ಶನ ಮಾಡುವುದು ಶೋಷಣೆಯ ಸಂಕೇತ ಎಂಬುದನ್ನು ಇಂಥ ನಟಿಯರು ಅರಿತುಕೊಳ್ಳಬೇಕು.

ಬದಲಾದ ಇಂದಿನ ಪರಿಸರದಲ್ಲಿ ಸ್ತ್ರೀ ಎಲ್ಲ ಕ್ಷೇತ್ರಗಳಲ್ಲೂ ದುಡಿಯುತ್ತಿದ್ದಾಳೆ. ಅವಳು ಸಬಲೆ, ಬುದ್ಧಿವಂತೆ, ಜ್ಞಾನ ಪಿಪಾಸು ಅವಳಿಗೂ ಸ್ವಂತ ವ್ಯಕ್ತಿತ್ವವಿದೆ—ಎಂಬ ಚಿತ್ರೀಕರಣವಾಗಬೇಕು. ಇಂಥ ಕಾರ್ಯ ಆಗಬೇಕಾದರೆ ಈ ಬಗೆಯ ದಿಟ್ಟ ಪಾತ್ರಗಳನ್ನು ಲೇಖಕ ಲೇಖಕಿಯರು ಸೃಷ್ಟಿಮಾಡಬೇಕು. ಹೊಸ ಆಲೋಚನೆಗಳಿರುವ ಗಂಭೀರ ನಿರ್ದೇಶಕರು ಇಂಥವರನ್ನು ಚಲನಚಿತ್ರ ಮಾಧ್ಯಮದಲ್ಲಿ ತರುವ ಧೈರ್ಯ ತೋರಬೇಕು.

ಪ್ರೇಕ್ಷಕರು ಮೇಣದ ಮುದ್ದೆಗಳಂತೆ, ಅವರನ್ನು ಯಾವ ಆಕಾರಕ್ಕೆ ಬೇಕಾದರೂ ತಿದ್ದುವ ಹೊಣೆ, ಬುದ್ಧಿ ಜೀವಿಗಳ ಮೇಲಿದೆ. ಬಹುತೇಕ ಪ್ರೇಕ್ಷಕರಲ್ಲಿರುವ ಕೀಳು ಅಭಿರುಚಿಯನ್ನು ಸದಭಿರುಚಿಯಾಗಿ ಬದಲಾಯಿಸುವುದು ಕೂಡ ಸಾಧ್ಯ—ನಾನು ಮೇಲೆ ಹೇಳಿದವರೆಲ್ಲರಿಗೂ ಧೈರ್ಯವಿದ್ದರೆ ಮತ್ತು ಕಾಳಜಿ ಇದ್ದರೆ.

ಈ ಎಲ್ಲಾ ಬದಲಾವಣೆಗಳ ಜೊತೆಗೆ ಸ್ತ್ರೀ ಸಮುದಾಯ ಕೂಡ ತನಗಾಗುತ್ತಿರುವ ಶೋಷಣೆಯ ಬಗ್ಗೆ ಪ್ರತಿಭಟಿಸಬೇಕು. ಚಲನಚಿತ್ರದಲ್ಲಿ ವ್ಯಾಪಕವಾಗಿ ಹಬ್ಬಿರುವ ಹಿಂಸಾಚಾರ, ಮಾನಭಂಗ ಅತ್ಯಾಚಾರ, ಅಶ್ಲೀಲತೆ ಇವುಗಳನ್ನು ಧೈರ್ಯವಾಗಿ ಖಂಡಿಸುವ ಬಲಿಷ್ಠ ಮಹಿಳಾ ಆಂದೋಲನ ಹುಟ್ಟಿದಾಗ, ನಿರ್ಮಾಪಕರು ಚಿತ್ರ ಮಾಡುವಾಗ ಎಚ್ಚರಿಕೆ ವಹಿಸಲೇ ಬೇಕಾಗುತ್ತದೆ.

ಇಷ್ಟೆಲ್ಲಾ ಹೇಳಿದರೂ ವಾಸ್ತವ ಪರಿಸ್ಥಿಯ ಅರಿವು ನನಗಿದ್ದೇ ಇದೆ. ಇಂದಿನ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಗೆ ಸಮಾನತೆ ಇಲ್ಲದಿರುವುದರಿಂದ ಮತ್ತು ಅವಳ ಬಗ್ಗೆ ಗೌರವ ಭಾವನೆ ಇಲ್ಲದಿರುವುದರಿಂದ ಇಂತಹ ವಿಕೃತ ಚಿತ್ರಗಳು ಬರುತ್ತಿವೆ. ಆದ್ದರಿಂದ ಮೂಲಭೂತವಾಗಿ ಸಮಾಜದ ಸ್ವರೂಪದಲ್ಲಿ ಬದಲಾವಣೆಯಾದ ಹೊರತು ಸ್ತ್ರೀಯ ಚಿತ್ರಣ ಭಿನ್ನವಾಗಲಾರದು ಅನಿಸುತ್ತದೆ.

"ದಡ್ಡನ ಹೃದಯ ಅವನ ಬಾಯಿಲ್ಲಿರುತ್ತದೆ; ಬುದ್ಧಿವಂತನ ಬಾಯಿ ಅವನ ಹೃದಯದಲ್ಲಿರುತ್ತದೆ"

—ಫ್ರಾನ್‌ಕ್ಲಿನ್

# ಮೂಢನಂಬಿಕೆ-ಫ್ಯಾಂಟಸಿ, ಕೆಲವು ಟಿಪ್ಪಣಿಗಳು

—ಶ್ರೀಮತಿ ವಿಜಯಾ

ಮೂಢನಂಬಿಕೆಯ ಬಗ್ಗೆ ಮಾತನಾಡುವ ಮೊದಲು ಯಾವುದು ಮೂಢ ನಂಬಿಕೆ ಎಂಬುದನ್ನು ಕುರಿತ ಕೆಲವು ಮೂಲಭೂತ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕಾಗುತ್ತದೆ.

ಕೆಲವು ವಸ್ತು, ವ್ಯಕ್ತಿ, ಘಟನೆಗೆ ಅಸ್ತಿತ್ವವನ್ನು ಸೂಚಿಸುವ ಸಂಕೇತಗಳಿರುತ್ತವೆ. ಈ ಸಂಕೇತಗಳು ಕ್ರಮೇಣ ಮನಸ್ಸಿನ ಆಳಕ್ಕಿಳಿದು ಸೂಕ್ಷ್ಮವಾದ ಭಾವನೆಗಳಲ್ಲಿ ಬೆರೆತು ಹೋಗುತ್ತದೆ. ಹೀಗಾದಾಗಲೇ ಒಂದು ನಡೆ "ಆಚಾರವಾಗಿ" ಮಾರ್ಪಟ್ಟು ಸಮುದಾಯದ ಮನೋಧರ್ಮವನ್ನು ಒಂದು ಕಟ್ಟಿಗೆ ಒಳಪಡಿಸಿ ಆಳತೊಡಗುತ್ತದೆ.

ಆರಂಭದಲ್ಲಿ ಕೇವಲ ಅನುಕೂಲಕ್ಕಾಗಿ ಏರ್ಪಟ್ಟವುಗಳು ಮುಂದೆ ವ್ಯಕ್ತಿಯಿಂದ ದೃಷ್ಟಿಗೆ ಹಾರಿದಾಗ ಒಳಗಿಂದೊಳಗೆ ಅನೇಕ ಸಂದರ್ಭದಲ್ಲಿ ಅಘೋಷಿತವಾಗಿ ಕೂಡಾ ಸ್ವಾತಂತ್ರ್ಯವನ್ನು ಹರಣ ಮಾಡಿರುತ್ತದೆ. ಇದು ಅವನವನ ಅನುಭವಕ್ಕೆ ಬರುವ ವೇಳೆಗೆ ಅದನ್ನು ಮೀರಿ ನಿಲ್ಲಲಾಗದ ಹಾಗೆ ಸಮುದಾಯದ ಒಂದು ಚೌಕಟ್ಟಿಗೆ ಬದ್ಧನಾಗಬೇಕಾದ ಸ್ಥಿತಿಯಲ್ಲಿರುತ್ತಾನೆ. ಹಲ್ಲು ಕಚ್ಚಿ ನೋಡಿಕೊಳ್ಳುವುದೋ, ವಿವೇಚನೆಗೂ, ಅವಕಾಶ ಕೊಡದೆ ಒಪ್ಪಂದ ಮಾಡಿಕೊಂಡು ಬದುಕುವುದೋ ನಡೆದುಹೋಗುತ್ತದೆ.

ಇಂಥ ಸಾಮುದಾಯಿಕ ನಿಷ್ಠೆಯನ್ನು ಬಂಡವಾಳ ಮಾಡಿಕೊಂಡ ಸಮೂಹ ಮಾಧ್ಯಮಗಳು "ಒಂದನ್ನು ನಿರ್ಲಕ್ಷಿಸಿ" ಅನೇಕ" ದ ಒತ್ತಡವನ್ನೇ ಪುಷ್ಟೀಕರಿಸುತ್ತ ನಡೆಯುತ್ತವೆ. "ಸಮಾನ, ಜನ ಏನಂತಾರೆ?" ಎಂಬ ಉದ್ಗಾರದೊಡನೆ ಸಮೂಹದ ಸಲುವಾಗಿ ಒಪ್ಪಿಕೊಳ್ಳುವ ಅನಿವಾರ್ಯಗಳಾಗಿ ಬಿಡುತ್ತವೆ.

---

ಶ್ರೀಮತಿ ವಿಜಯಾ, ನಂ. 153, 'ಇಳಾ' ನಾಲ್ಕನೇ ಮುಖ್ಯರಸ್ತೆ, ಎರಡನೇ ಅಡ್ಡರಸ್ತೆ, ಚಾಮರಾಜಪೇಟೆ, ಬೆಂಗಳೂರು-560 018.

ಯಾವುದೇ ಸಮೂಹ ಮಾಧ್ಯಮ ಲೋಕದಲ್ಲಿ ಡೋಲಾಯಮಾನ ಸ್ಥಿತಿಯಲ್ಲಿ ಇದಮಿತ್ಥಂ ಎನ್ನಲಾಗದ ರೀತಿಯಲ್ಲಿ ಇರುವ ಅನೇಕ ವಿಷಯಗಳನ್ನು ಮಂಡಿಸುವ ಪ್ರಯತ್ನದಿಂದ ವಿರಮಿಸಬೇಕು. ಈ ಮಾತು ಮುಖ್ಯವಾಗಿ ದೇವರು, ಧರ್ಮ, ಜಾತಿ ಇಂತಹ ವಿಚಾರದಲ್ಲಿ ಹೆಚ್ಚು ಒತ್ತುಕೊಟ್ಟು ಹೇಳಬೇಕಾಗಿದೆ. ಇವುಗಳ ಉಪವಿಭಾಗಗಳ ಹಾಗೆ ಬರುವ ಕೆಲವು ಆಚಾರಗಳು, ಪವಾಡಗಳು ವಾಮಾಚಾರಕ್ಕೆ ಸಂಬಂಧಪಟ್ಟ ಕಥಾನಕಗಳು, ಸಾಮಾಜಿಕವಾಗಿ ಅಪಾಯಕಾರಿ ಅಂಶಗಳು. ವಿಕಸನಕ್ಕಿಂತ ಸೊರಗಿಸುವುದೇ ಇವುಗಳ ಫಲ.

ಇಲ್ಲಿ ನಾನು ಒಂದು ಅಂಶವನ್ನು ಸ್ಪಷ್ಟಮಾಡ ಬಯಸುತ್ತೇನೆ. "ಶ್ರೀನಿವಾಸ ಕಲ್ಯಾಣ" "ಲವಕುಶ" "ಶ್ರೀ ಕೃಷ್ಣ ಪಾರಿಜಾತ" ಈ ಬಗೆಯ ಚಿತ್ರಗಳು ಹೆಚ್ಚು ಅಪಾಯಕಾರಿ ಅಲ್ಲ. ಏಕೆಂದರೆ ಇವು ಪುರಾಣದ ಕಥೆಗಳಾಗಿ ಕೇಳುವ – ನೋಡುವ ಮಟ್ಟದಿಂದಾಚೆಗೆ ಹೋಗುವುದಿಲ್ಲ. ಅತಿರೇಕವೆಂದರೆ ಹಳ್ಳಿಗರು ಭಕ್ತಿಯಿಂದ ದೈವಸಾಕ್ಷಾತ್ಕಾರವೆಂದು ಭಾವಿಸಿ ಅರ್ಚಿಸಿಬಿಡಬಹುದು. ಆದರೆ ಇವು ಕೌಟುಂಬಿಕ ಪರಿಸರಕ್ಕೆ ಮನುಷ್ಯನ ಪ್ರಯತ್ನಗಳಿಗೆ ಮಾರಕವಾಗುವುದಿಲ್ಲ. ಮಾನವಾತೀತ ವ್ಯಕ್ತಿಗಳ ವಿಚಾರ ಎಂಬ ಅರಿವಿರುವುದರಿಂದ ಇವು ಕೇವಲ ಹೊರಪದರದಲ್ಲಿ ಉಳಿಯುತ್ತವೆ. ಆದರೆ ಈ ಭಕ್ತಿ ಭಾವವನ್ನೇ ಬಳಸಿ ಹಣಗಳಿಸಲು ಹುಂಡಿ, ಮಂಗಳಾರತಿಯಂಥ ಏರ್ಪಾಟು ಮಾಡುವ (ಚಿತ್ರಮಂದಿರದ) ಮುಂದೆ ಜನರ ಮನಸ್ಸು, ರೋಗಗ್ರಸ್ತ ಎಂಬುದನ್ನು ಇಲ್ಲಿ ನೆನೆಯಬೇಕು.

'ಶ್ರೀನಿವಾಸನಲ್ಲಿ ಭಕ್ತಿಯಿಂದ ನಡೆದುಕೊಂಡರೆ ಒಳಿತು ಇಲ್ಲವಾದರೆ ಬರಬಾರದ ಕಷ್ಟ ಬಂದೀತು ಎಂದು 'ಒತ್ತಿ' ಹೇಳುವ ಸಿನಿಮಾಗಳು ಹೆಚ್ಚು ಅಪಾಯಕಾರಿಯಾಗಿರುತ್ತವೆ. ಎಂದರೆ ವರ್ತಮಾನದ ಬದುಕಿನ ರೀತಿಗೆ ಮತ್ತಾವುದೋ ಅತಿಶಯದ ಶಕ್ತಿಯ ಪ್ರೇರಣೆ, ಪ್ರಭಾವವೇ ಕಾರಣ ಎನ್ನುತ್ತಾ ಮನುಷ್ಯ ಪ್ರಯತ್ನವನ್ನು ನಿರ್ಲಕ್ಷಿಸಿಬಿಡುವುದು ಮತ್ತು ದೈವಭಕ್ತಿಯ ಪ್ರತಿರೇಕವನ್ನು ಹೇಳುತ್ತ ಒಂದು ವಿಚಿತ್ರ ಭಯವನ್ನು ಸೃಷ್ಟಿಸುವ ಮೂಲಕ ಮನುಷ್ಯನ 'ಧೀ' ಶಕ್ತಿಯನ್ನು ಕುಗ್ಗಿಸಿ ದುರ್ಬಲನನ್ನಾಗಿ ಮಾಡಿಬಿಡುವುವು. ಇಂಥ ಅಂಶವನ್ನು ಹೇಳುವ ಚಿತ್ರಗಳಲ್ಲಿ ಉದ್ದಕ್ಕೂ ಸಜ್ಜನರೆಂದು ತೋರುವವರು, ವಿಚಾರವಾದಿಗಳಾದವರು ಸಂಕಷ್ಟಕ್ಕೆ ಒಳಗಾಗುತ್ತಿರುತ್ತಾರೆ. ಮತ್ತು ಇಲ್ಲೆಲ್ಲಾ ಎಷ್ಟೇ ಒಳ್ಳೆಯತನವಿದ್ದರೂ "ವಿಧಿ" "ಕರ್ಮ" ಗಳು ಭಾದಿಸುತ್ತವೆ ಎಂಬುದನ್ನು ಹೇಳುವ ಕ್ರಮವೇ ದೋಷಪೂರ್ಣ.

(ಉದಾ : "ಗಣೇಶ ಮಹಿಮೆ" "ನಾ ನಿನ್ನ ಬಿಡಲಾರೆ" ಇತ್ಯಾದಿ)

ಇವು ಅಭಿವೃದ್ಧಿಪರ ರಾಷ್ಟ್ರಗಳ ಸಂದರ್ಭದಲ್ಲಿ ಹೆಚ್ಚು ಅಪಾಯಕಾರಿ ಎನ್ನುವದನ್ನು ಸಿನಿಮಾದಂಥ ಪ್ರಭಾವೀ ಮಾಧ್ಯಮಗಳು ಅರಿತು ವರ್ತಿಸಬೇಕು. ಇವು ಎಚ್ಚರದಿಂದ ಅರ್ಥಪೂರ್ಣವಾಗಿ ಕೆಲಸ ಮಾಡಿದಾಗಲೇ ರಾಷ್ಟ್ರದ ಅಭಿವೃದ್ಧಿಗೆ ಅಗತ್ಯವಾದ ಪ್ರಗತಿಪರ ಆಲೋಚನೆ, ಧೈರ್ಯ, ದುಡಿಮೆ ಇತ್ಯಾದಿಗಳತ್ತ ಸಮೂಹದ ಒಲವನ್ನು ತಿರುಗಿಸುವುದು ಸಾಧ್ಯ. ಇದು ಈ ದೇಶದ ಸಮೂಹ ಮಾಧ್ಯಮಗಳ ಮುಂದಿರುವ 'ತುರ್ತು' ಸಹ.

ಮನೋರಂಜನೆ ಮತ್ತು ಅನೇಕ ಸಂದರ್ಭಗಳಲ್ಲಿ ತಾಂತ್ರಿಕ ಪರಿಣತಿಯ ಪ್ರದರ್ಶನ, ಅದನ್ನೂ ಮೀರಿ ಕಲಾತ್ಮಕತೆಯ ಸೋಗು ಅನೇಕ ತಪ್ಪುಗಳನ್ನು ಮಾಡುತ್ತಲೇ ನಡೆದಿದೆ. ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಅರ್ಥಮಾಡಿಸಲು ಆಧುನಿಕ ತಂತ್ರಜ್ಞಾನದ ಬಳಕೆಯೋ ಏನೋ ತಂತ್ರಜ್ಞಾನದಿಂದ ಕೆಲವು ಹಿತಾಸಕ್ತಿಗಳ ಕಾರಣದಿಂದ ಅಥವಾ ಮಾಧ್ಯಮದ ಒಳಕ್ಕೆ ಹೇಗಾಗಬೇಕೆಂಬುದೇ ಅರಿವಿಲ್ಲದ ಮೌಢ್ಯದಿಂದ ಹೊಸ ಹೊಸ ಸಮಸ್ಯೆಗಳನ್ನು ಸೃಷ್ಟಿಸುತ್ತಾ ಸಾಗಿರುವುದು ದೊಡ್ಡ ದುರಂತ. ಇಂಥ ಸಂದರ್ಭದಲ್ಲಿ ಸರ್ಕಾರವು ಇವೆಲ್ಲವನ್ನು ಗಮನದಲ್ಲಿಟ್ಟೇ ನಿಯಮಿಸಿರುವ 'ಸೆನ್ಸಾರ್‌ಷಿಫ್' ಸಹ ಫಲಕಾರಿಯಾಗದೆ ಹೋಗಿದೆ ಎಂಬುದನ್ನು ಗಮನಿಸಿ ಉದಾ : ಚಿತ್ರವೊಂದರ ಹೆಸರಿನಲ್ಲಿದ್ದ "ಮಹಿಮೆ ಶಬ್ಧ ತೆಗೆಸಿ ಹಾಕಿಸಿದರಂತೆ. ಪವಾಡಗಳು ಚಿತ್ರಗಳಲ್ಲಿ ಇರಬಾರದೆಂಬ ನಿಯಮಕ್ಕೆ ಬದ್ಧರಾಗಿ. ಆದರೆ ಚಿತ್ರದಲ್ಲಿರುವ ಪವಾಡಗಳನ್ನು ತೆಗೆಯದಾದರು." ಉದ್ದಕ್ಕೂ ಇಂಥ ಚಾಣಾಕ್ಷತನವನ್ನೇ ಬಳಸುವ ಪ್ರವೃತ್ತಿ ಕಾಣುತ್ತ ಬಂದಿದ್ದೇವೆ.

'Exorcist' ಚಿತ್ರ ಬಂದಾಗ ನಮಗೆ ಹೆಚ್ಚು Thrill ಎನಿಸಲಿಲ್ಲ. ಇದು ಅತ್ತಲವರಿಗೆ ಆರಾಮದಲ್ಲಿದ್ದವರಿಗೆ, ಸಮಸ್ಯೆಗಳು ಬೇಕು. ಭಯ, ಭೀಬತ್ಸದ ಅಭಾವವಿದ್ದವರಿಗೆ ಬೇಕು. ನಮಗದು ವಿಶೇಷವಲ್ಲ. ಆದರೆ ಅದೇ 'ಮಾದರಿ' ಆಗಬೇಕಾಗಿರಲಿಲ್ಲ. ಆಯಿತು ಎಂಬುದೇ ಮುಜುಗರದ ಸಂಗತಿ. ಭಯ ಭೀಬತ್ಸ ಒಂದು ನೋಟವಾಗುವುದು ಬೇರೆ. ಅದೇ ಆಗಿಬಿಡುವುದು ಬೇರೆ. ಈ ಎರಡನೇ ಹಂತದಲ್ಲಿರುವ ನಮ್ಮ ಪರಿಸರಕ್ಕೆ ಅವು ಅಪಾಯಕಾರಿಯೆಂಬ ಎಚ್ಚರ ನಮಗಿರಬೇಕು. ಇಂದ ವಸ್ತು ತಾತ್ರವನ್ನು ಬಳಸಿಕೊಂಡಾಗ ಪ್ರೇಕ್ಷಕನ ಮನಸ್ಸನ್ನು ಕದಡಿಬಿಡುತ್ತದೆ.

ಸಮೂಹ ಮಾಧ್ಯಮಗಳಲ್ಲಿ ಕೆಲಸ ಮಾಡುತ್ತಿರುವ ಜನಕ್ಕೆ ಇದರ ಪರಿಣಾಮ, ಅಗತ್ಯಗಳ ಅರಿವಿಲ್ಲ. ಅನೇಕ ಸಂದರ್ಭಗಳಲ್ಲಿ ತಾಂತ್ರಿಕ ಕಸರತ್ತು ಕೆಲಸ ಮಾಡಿದ್ದರೆ, ಕ್ರಮೇಣ ಕೇವಲ ವ್ಯವಹಾರವಾಗಿ ಸ್ವಘೋಷಿತ ತತ್ವಗಳನ್ನು ಮಾಡಿಕೊಳ್ಳುವ ಮೂಲಭೂತ ಉದ್ದೇಶವನ್ನು ತಿರುಚಿ ಹಾಕಿರುವ ಸಂಭವಗಳೇ ಹೆಚ್ಚು.

ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಒಂದು ಪ್ರಭಾವಿ ಮಾಧ್ಯಮದ ದುರುಪಯೋಗ ಮಾತ್ರ ಆಗುತ್ತಿದೆಯಾಗಲೀ, ನಮ್ಮ ಸಂದರ್ಭಕ್ಕೆ ನಾವೇನು ಕೆಲಸ ಮಾಡಿದರೇ ಪುರಾತನವಾದೀತೆಂಬ ಕಡೆಗೇ ಗಮನ ಹರಿಸಿಲ್ಲ, ಎಂಬ ಮಾತನ್ನು ಮತ್ತೆ ಮತ್ತೇ ಒತ್ತಿ ಹೇಳ ಬಯಸುತ್ತೇನೆ.

ನಮ್ಮ ಹಳ್ಳಿಗಾಡಿನ ಜನ ಇನ್ನು ಹೆಚ್ಚು ಮಾಲಿನ್ಯಕ್ಕೆ ಒಳಗಾಗಿಲ್ಲ. ನಾನು ಕಂಡಂತೆ ಸಿನಿಮಾದ 'ಶ್ರೀನಿವಾಸ' ನಿಗೆ 'ರಾಮು'ನಿಗೆ ಕಾಯಿ ಒಡೆದು ಕರ್ಪೂರದ ಆರತಿ ಬೆಳಗಿದ ಜನ 'ನಾ ನಿನ್ನ ಬಿಡಲಾರೆ' ಗಣೇಶ ಮಹಿಮೆ' ಎಂಥ ಕುಟುಂಬ ಸಮಸ್ಯೆಯನ್ನು ದೇವರ ಜೊತೆ ಸಮೀಕರಿಸಿ ಪವಾಡವಾಗಿರದ ಚಿತ್ರಗಳನ್ನು ನೋಡಿ ದಾಗ ಹೆಚ್ಚು ಪ್ರಭಾವಿತರಾಗಲಿಲ್ಲ. ಮೇಲೆ ಹೇಳಿದ ರೀತಿಯಲ್ಲಿ ಹೇಳಿಕೊಳ್ಳುತ್ತ ಮುಂದೆ ಸಾಗಿದ್ದನ್ನು ಕಂಡಿದ್ದೇನೆ. ಆದರೆ ಇದು ಕೈಗಾರಿಕೀಕರಣದಲ್ಲಿ ಅನಿಶ್ಚಯತೆಯ ಗೊಂದಲದಲ್ಲಿ ಬಿದ್ದ 'ಪ್ರಜ್ಞಾವಂತ 'ಪಟ್ಟಣಿಗರ ಮಟ್ಟದಲ್ಲಿ ತೀರ ಗಾಂಭೀರ್ಯವಾದ ಪರಿಣಾಮ ಬೀರಿದೆ ಎಂಬುದನ್ನು ನೋಡಿ ನನಗೆ ಅಚ್ಚರಿಯಾಗಿದೆ. ಪಟ್ಟಣಗಳನ್ನೇ ಮಾದರಿಯಾಗಿಸಿಕೊಂಡ ಹಳ್ಳಿಗ ಬಹುಬೇಗ ಇತ್ತವಾಲುವ ಸಂಭವ ಇರುವುದರಿಂದ ಇಂಥ ಚಿತ್ರಗಳು ಹಳ್ಳಿಗಳನ್ನು ಈ ಅರ್ಥದಲ್ಲಿ ವ್ಯಾಪಿಸುವ ಮೊದಲೇ ಎಚ್ಚರವಾಗು ವುದು ವಿಹಿತ. ಶುದ್ಧ ವಾತಾವರಣವನ್ನು ಕಾಪಾಡಿಕೊಳ್ಳುವ ಪ್ರಗತಿಪರ ಚಿಂತನೆಗೆ ತೊಡಗಿಸುವ ದಿಕ್ಕಿನಲ್ಲಿ ಈ ಮಾಧ್ಯಮದ ಅರ್ಥ ಪೂರ್ಣ ಬಳಕೆ ಆಗಬೇಕಾಗಿದೆ.

-0- -0- -0-

ಕಲ್ಪನೆ ಭ್ರಾಮಕತೆ, ಭ್ರಾಮಕ ಕಲ್ಪನೆ, ಹೀಗೆ ಫ್ಯಾಂಟಸಿಯ ಸ್ವರೂಪಗಳು ಹಲವು. ಕಲ್ಪನೆಯ ಅರ್ಥದಲ್ಲಿ ಫ್ಯಾಂಟಸಿಯನ್ನು ಆಲೋಚಿಸಿದಾಗ ಏರ್ಪಡುವ ಸಂದರ್ಭಗಳು ಬೇರೆ. ಸಿನಿಮಾ ಎಂಬುದೇ ಒಂದು ಫ್ಯಾಂಟಸಿ ಎಂಬ ಬುದ್ಧಿವಂತ ಗ್ರಹಿಕೆ ನಮ್ಮಲ್ಲಿ ಇನ್ನೂ ಬಂದಿಲ್ಲ. ಹೀಗಾದಾಗ ವಾಸ್ತವ ಮತ್ತು ಭ್ರಮೆಗಳ ಮಧ್ಯೆ ಆಯ್ಕೆಯ ಪ್ರಶ್ನೆಗಿಂತ ವ್ಯತ್ಯಾಸವೇ ತಿಳಿಯದ ಒಂದು ಸ್ಥಿತಿ. ನಮ್ಮ ಎಲ್ಲಾ ಕಲಾ ಮಾಧ್ಯಮಗಳಿಗೂ ಇರುವ ಬಹು ದೊಡ್ಡ ಸಮಸ್ಯೆಯೆಂದರೆ ಯಾವನೇ ಪ್ರೇಕ್ಷಕ ಇದನ್ನು ಫ್ಯಾಂಟಸಿ ಎಂದುಕೊಂಡು ತೆಪ್ಪಗಿರುವುದಿಲ್ಲ. ಒಂದಲ್ಲ ಒಂದು ಹಂತದಲ್ಲಿ ಎಲ್ಲೋ ತನ್ನನ್ನು ಗುರುತಿಸಿಕೊಳ್ಳತೊಡಗುತ್ತಾನೆ; ತಲ್ಲೀನನಾಗುತ್ತಾನೆ.

ಒಂದು ಜನಪದ ಕಥೆಯಾದರೆ ಫ್ಯಾಂಟಸಿ ಸುಸ್ಪಷ್ಟ ಉದಾ :

ಟಾಟಾ – ಬಿರ್ಲಾ ಅಂಥವರಿಗೆ ಆಕಾಶದ ಯೋಚನೆಯಾದರೆ ಸಾಮಾನ್ಯರಿಗೆ ಅವನಿಗಿಂತ ಕೊಂಚ ಮೇಲಿನದು, ಅಥವಾ ಹಾಗಾಗಬೇಕೆಂಬುದು, ಕನಸು ಕಾಣುವುದು

ಅವೆಲ್ಲವನ್ನು ಸುಲಭವಮಾಡಿಕೊಳ್ಳುವ ಮಾರ್ಗ, ಕನಸುತ್ತ ರೆಕ್ಕೆ ಕಟ್ಟಿಕೊಂಡು ಹಾರುವ ಪ್ರವೃತ್ತಿಯಿಂದಲೇ ಮನುಷ್ಯ ಈ ಬರ್ಬರ ಪರಿಸ್ಥಿತಿಯಲ್ಲು ಬದುಕುತ್ತಾನೆ. ಮನುಷ್ಯ ನನ್ನು ಉತ್ಸಾಹಗೊಳಿಸುವ, ಮುನ್ನುಗ್ಗಲು ಪ್ರೇರೇಪಿಸುವ ಹಂತದಲ್ಲಿ ಈ ಕಲ್ಪನೆಗಳಿಗೆ ಪ್ರಾಶಸ್ತ್ಯವಿದೆ.

ಒಂದು Science fiction ಆದಾಗ ಕಲ್ಪನೆ ಹೊಸದರ ಆವಿಶ್ಕಾರಕ್ಕೆ, ಹುಡುಕುವುದಕ್ಕೆ ನೆರವಾಗಿಬಿಡಬಹುದು. ಒಬ್ಬ ಮಧ್ಯಮವರ್ಗದ ಸುಖ ಜೀವನದ ಕನಸು ಇತರರಿಗೆ ಅಪಾಯಕಾರಿಯಲ್ಲದ ತನ್ನದೇ ಲೋಕದ ವಿಹರದಲ್ಲಿ ಸಂತೃಪ್ತ ಗೊಳಿಸುವ ಸಾಧ್ಯತೆಯುಂಟು. ಒಂದು "ಸಿಂಡೆಲ್ರಾ" ಅಂಥ ಕಥಾಭಾಗ ಮಗುವಿನ ಮನಸ್ಸನ್ನು ಅರಳಿಸಬಹುದು. ಒಬ್ಬ ಫ್ಯಾಂಟಾಮ್, ಟಾರ್ಜಾನ್ ಬಂದರೆ ಸಾಹಸ ತೋರಿದರೆ ಪ್ರೇಕ್ಷಕ ಖುಷಿ ಪಡಬಹುದು.

ಆದರೆ ಫ್ಯಾಂಟಸಿಯು ಅಪಾಯಕಾರಿಯಾಗುವುದು ನಮ್ಮ ಚಿತ್ರಗಳ ನಾಯಕರ ಸಾಹಸ, ಅತಿ ಬುದ್ಧಿವಂತಿಕೆಗಳ ಪ್ರದರ್ಶನದಿಂದ. ಮನುಷ್ಯನನ್ನು ಸಹಜತೆಯಿಂದ ದೂರಸರಿಸಿ ಆ ಬಗೆಯ ನಾಯಕನನ್ನು ನೋಡಿ ಸುಖಿಸಿ ಅಂತಾಗುವ ಪ್ರಯತ್ನದಲ್ಲಿ ಜೀವನದ ಸಮಸ್ಯೆಗಳಿಗೆ ಹಾಗೇ ಪರಿಹಾರ ಕಂಡು ಕೊಳ್ಳಹೋಗಿ ವಾಸ್ತವ ಹಾಗಲ್ಲ ದಾಗ ಬೆಚ್ಚಿ ಬೀಳುತ್ತಾನೆ, ಸೊರಗುತ್ತಾನೆ. ಇಂಥ ಸಂದರ್ಭದಲ್ಲಿ ಮಾಧ್ಯಮಗಳು ಎಚ್ಚರದಿಂದ ವರ್ತಿಸಬೇಕು. 'ಕೌಬಾಯ್ ಕುಳ್ಳ' ಇತ್ಯಾದಿ ಚಿತ್ರಗಳು ಫ್ಯಾಂಟಸಿಯ ಅರ್ಥವನ್ನು ವಿಕೃತಗೊಳಿಸಿವೆ. ಹಾಗೆ ನೋಡಿದರೆ ಭಾರತೀಯ ಸಂದರ್ಭದಲ್ಲಿ ನಿಜ ವಾದ ಫ್ಯಾಂಟಸಿ ಇನ್ನೂ ಬಂದಿಲ್ಲ.

ಮತ್ತೆ ಮತ್ತೆ ಹೇಳುವುದಾದರೆ ನಮ್ಮಲ್ಲಿ ಸಮಸ್ಯೆಗಳನ್ನು ಎದುರಿಸುವ ಜಾಣ್ಮೆ ಯನ್ನು ಬಳಸುವ ಸ್ವಪ್ರಯತ್ನಕ್ಕೆ ಬೆಲೆಕೊಡುವ ಪ್ರವೃತ್ತಿಯನ್ನು ಸೊರಗಿಸುವುದೇ ಹೆಚ್ಚು. ಬುದ್ಧಿವಂತರು ವ್ಯಾಖ್ಯಾನಿಸುವ ಸೌಂದರ್ಯ ಪ್ರಜ್ಞೆಯಾಗಲಿ ಕಾಪಾಡಿ ಕೊಳ್ಳಬೇಕೆಂಬ Ritual richness ಆಗಲಿ, ಮಾತಿನ ಜಾಣ್ಮೆಗಳೇ ವಿನಾ ಪ್ರಗತಿಪರ ಆಲೋಚನೆಗೆ ಕಡೆಯ ಪಕ್ಷ ಸುಂದರ ಕಲ್ಪನೆಗೆ ಪೂರಕವಾಗುವುದಿಲ್ಲ ಎಂಬುದನ್ನು ಗಮನಿಸಬೇಕು. ಆದರೆ ಅತ್ತ ಜವಾಬ್ದಾರಿಯಿಲ್ಲದ ಮಾಧ್ಯಮದ ಬಳಕೆ ತಿಳಿಯದ ಕೇವಲ ವ್ಯವಹಾರಿಗಳ ಕೈಯಲ್ಲಿ ಇತ್ತ ಶಬ್ದ ವ್ಯಭಿಚಾರದಲ್ಲಿ ಮೈಮರೆತ ಅತಿ ಬುದ್ಧಿ ವಂತರ ಹಿಡಿಯಲ್ಲಿ ಚಿತ್ರರಂಗದಂಥ ಪ್ರಭಾವೀ ಮಾಧ್ಯಮ ಸಿಕ್ಕಿಕೊಂಡಿದೆ ; ಎಂಬುದೇ ನಮ್ಮ ದುರಂತ.

●

# "ಖಾಸನೀಸರ ಕತೆಗಳು" ಕುರಿತು

**ಡಾ|| ಎಂ. ಚಿದಾನಂದಮೂರ್ತಿ**

---

**ರಾಘವೇಂದ್ರ ಖಾಸನೀಸರು ನಮ್ಮಲ್ಲಿಯ ಅತ್ಯಂತ ಸತ್ವಪೂರ್ಣ ಕಥೆಗಾರರು, ಕಳೆದ ಎರಡು ದಶಕಗಳಿಂದ ಕಥೆಗಳನ್ನು ಬರೆಯುತ್ತಿದ್ದರೂ; ಸಂಕಲನದ ರೂಪದಲ್ಲಿ ಬರುತ್ತಿರುವುದು ಇದೇ ಮೊದಲು. ಈ ಸಂಕಲನದ ಬಿಡುಗಡೆಯ ಸಂದರ್ಭದಲ್ಲಿ ಓದಿದ ಪ್ರಬಂಧವನ್ನು ಡಾ|| ಚಿದಾನಂದಮೂರ್ತಿಯವರು ಕಳಿಸಿದ್ದಾರೆ. ಅವರಿಗೆ ಶೂದ್ರ ಋಣಿಯಾಗಿದೆ.**

---

ತೀರ ಸಂಕೋಚ ಸ್ವಭಾವದ ಶ್ರೀ ರಾಘವೇಂದ್ರ ಖಾಸನೀಸರನ್ನು ನಾನು ತಮಾಷೆಮಾಡಿ ಅವರನ್ನು ಗಲಿಬಿಲಿಗೆ ಸಿಕ್ಕಿಸಿದ್ದು ಎಷ್ಟೋ ಬಾರಿ. ಅವರು ಹಾಕಿಕೊಂಡ ಬಟ್ಟೆಯನ್ನೋ ಚಾ ಪ್ರೇಮವನ್ನೋ ಗೇಲಿಮಾಡಿ, ಆ ಗೇಲಿ ತಪ್ಪು ಭಾವನೆಗೂ ಈಡು ಮಾಡಿದ ಒಂದು ಪ್ರಸಂಗವೂ ಇದೆ. ಆದರೆ, ನನ್ನ ಸ್ನೇಹಿತರಾದ ಶ್ರೀ ಖಾಸನೀಸರು ಏನಾದರೂ ಮಾಡಿ ಒಂದು ಕಥಾಸಂಕಲನವನ್ನು ಹೊರತರಬೇಕೆಂದೂ ಕೊನೆಯ ಪಕ್ಷ ಕಥೆ ಬರೆಯುವುದನ್ನು ಮುಂದುವರಿಸಬೇಕೆಂದು ನಾನು ಒತ್ತಾಯಿಸಿದ್ದಂತೂ ನಿಜ. ಪ್ರೀತಿ ಕರುಣೆಗಳಿಂದ ನೀವು ಯಾರನ್ನಾದರೂ "ಪ್ರಾಣಿ" ಎಂದು ಕರೆಯುವುದಾದರೆ ಅದಕ್ಕೆ ಅವರು (ಮತ್ತು ನಾನು ಸಹ ?) ಅರ್ಹರು. ಸಂಕೋಚ, ಅರ್ಥಮಾಡಿಕೊಳ್ಳಬಹುದಾದ ಸಣ್ಣ ಪ್ರಮಾಣದ ಕೀಳರಿಮೆ, ತಮಗೆ ಆತ್ಮವಿಶ್ವಾಸ ಸಾಲದೆಂಬ ಅವರೇ ಬಾಯಿಬಿಟ್ಟು ಹೇಳಿಕೊಳ್ಳುವ ಕೊರಗು, ತಮ್ಮನ್ನು ಸದಾ ಹಿನ್ನೆಲೆಯಲ್ಲಿಯೇ ಇಟ್ಟುಕೊಂಡಿರಬೇಕೆಂಬ ಛಲ, ಬದುಕಿನಲ್ಲಿ ಆಗಿರುವ ಆಘಾತಗಳು, ಹೊಸ ಜಗತ್ತಿಗೆ, ಅದರ ವಾಸ್ತವತೆಗೆ ಹೊಂದಿಕೊಳ್ಳಲಾಗದ ಒದ್ದಾಟ, ತಮ್ಮ ಹಂದ್ದೆಯಲ್ಲಿ ಇತರರಿಗೆ ಸಹಾಯಬೇಕೆಂಬ ಉತ್ಸಾಹ, ಸ್ನೇಹಪರತೆ, ಇವುಗಳಿಂದ ಅವರು ನನಗೆ ಪ್ರಿಯರಾಗಿದ್ದಾರೆ. ಅವರ ಸ್ನೇಹದಿಂದಾಗಿ ನನಗೆ ನನ್ನ ಬದುಕಿನಲ್ಲೇ ಒಂದು ಸಾಹಿತ್ಯದ ಗಣ್ಯ ಕೃತಿಯು ಮೊದಲನೆ ಬಾರಿ (ಮತ್ತು ಕೊನೆಯ ಬಾರಿ ಎಂದು ಆಶಿ

---

ಡಾ|| ಎಂ. ಚಿದಾನಂದಮೂರ್ತಿ, ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - 560056.

ಸಂವ( ಮಾತನಾಡುವ ಅವಕಾಶ ಒದಗಿದೆ. ನಾನು ಸಾಮಾನ್ಯವಾಗಿ ಹೊಸ ಸಾಹಿತ್ಯದ ಬಗ್ಗೆ ಮಾತನಾಡಲು ಬಯಸುವುದಿಲ್ಲ; ಅದು ಖಂಡಿತ ನನ್ನ ಕ್ಷೇತ್ರ ಅಲ್ಲ. ಈ ದಿನ ಅವಕಾಶ ದೊರೆತಿರುವುದು ಖಾಸನೀಸರ ವಿಶ್ವಾಸದಿಂದ ಎಂಬುದು ತೀರ ನಿಚ್ಚಳವಾಗಿದೆ.

ಬಹು ಕಡಮೆ ಸಂಖ್ಯೆಯ ಕತೆಗಳನ್ನು ಬರೆದೂ ಸಣ್ಣ ಕತೆಗಳ ಕ್ಷೇತ್ರದಲ್ಲಿ ಮತ್ತೆ ಮತ್ತೆ ಉಲ್ಲೇಖವಾಗುತ್ತಿರುವುದು ಖಾಸನೀಸರ ವೈಶಿಷ್ಟ್ಯ. ಅವರ ಈ ಕಥಾ ಸಂಕಲನವನ್ನು ಹೊರತರುತ್ತಿರುವ ಚಿ. ಶ್ರೀನಿವಾಸರಾಜು ಮತ್ತು ಕೆ. ಎಚ್. ರಾಮಯ್ಯ ಅಭಿನಂದನಾರ್ಹರು.

ಅವರ ಈಗಿನ ಸಂಕಲನದ ಐದು ಕತೆಗಳು ಐದು ರತ್ನಗಳು. ಈ ಐದೂ ಕತೆಗಳಲ್ಲಿ ಕಂಡುಬರುವ ಸಮಾನ ಅಂಶವೆಂದರೆ ಒಂಟಿತನ. 'ಅಪಘಾತ' ಕತೆಯ ರಾಮನಾಥ ಎರಡೂ ಮುಂಗೈಗಳನ್ನು ಕಳೆದುಕೊಂಡರೂ ಇನ್ನೂ ಬದುಕಿನ ಬಗ್ಗೆ ಜೀವಂತ ಆಸಕ್ತಿಗಳನ್ನು ಉಳಿಸಿಕೊಂಡಿರುವುದು ಮತ್ತು ಒಂಟಿತನವನ್ನು ಅನುಭವಿಸಬಹುದಾದ ಸ್ಥಿತಿಯಿದ್ದರೂ ವಾಸ್ತವಗಳನ್ನು ಧೈರ್ಯವಾಗಿ ಎದುರಿಸುವ ಎದೆಗಾರಿಕೆ ಇರುವುದು ಒಂದು ವಿಶೇಷ. "ಅಪಘಾತ" ಒಂದು ದೃಷ್ಟಿಯಿಂದ ಖಾಸನೀಸರ ವಿರಳ ಲಘು ವಸ್ತುವಿನ ಕತೆ. ಹೆಣ್ಣೊಬ್ಬಳು ಮೋಸದಿಂದ ಒಬ್ಬ ವ್ಯಕ್ತಿಯ ಮೇಲೆ ಶೀಲಾಪಹರಣದ ಆರೋಪ ಹೊರಿಸಿ ಬಳಿಕ ತಾನೇ ತನ್ನ ಬಲೆಗೆ ಬಿದ್ದ ವಸ್ತು ಇಲ್ಲಿದೆ. ಮುಂಬಯಿಯ ವಿಲಾಸೀ ಬದುಕಿನ ಹಿಂದಿನ ಕೆಲವು ಕಠೋರ ಸತ್ಯಗಳನ್ನು ಅಲ್ಲಿನ ಜನರ ಯಾಂತ್ರಿಕ ಜೀವನವನ್ನು ಎತ್ತಿ ತೋರಲು ಇಲ್ಲಿ ಮಳೆ, ರೈಲ್ವೆನಿಲ್ದಾಣ, ರೈಲುಗಳು ಅದ್ಭುತ ರೀತಿಯಲ್ಲಿ ಬಳಕೆಯಾಗಿವೆ. ಸುತ್ತಲೂ ಒಂದು ಸಲ ಸೂಕ್ಷ್ಮವಾಗಿ ದೃಷ್ಟಿಹಾಯಿಸಿ ರಾಮನಾಥನಿಗೆ ಜೀವನದ ರೀತಿಯೇ ಆ ಪ್ಲಾಟ್‌ಫಾರ್ಮಿನ ಮೇಲೆ ಬಿಂಬಿಸಿದಂತೆನಿಸಿತು. ಇಲ್ಲಿ ಯಾರು ಯಾರಿಗೂ ಬಂಧಿತರಾಗಿಲ್ಲ. ಪ್ರತಿಯೊಬ್ಬನೂ ತನ್ನ ತನ್ನ ಹಗಲುಗನಸುಗಳಲ್ಲೇ ಗರ್ಕಾಗಿ, ಅವುಗಳನ್ನೇ ಹಿಂಬಾಲಿಸಿ ಯಾವುದೋ ರೈಲು ಹಿಡಿದು ಎಲ್ಲಿಯೋ ಹೋಗಿಬಿಡುತ್ತಾನೆ. ಇಲ್ಲಿ ಒಮ್ಮೆ ನೋಡಸಿಕ್ಕ ಮುಖ ಇನ್ನೊಮ್ಮೆ ನೋಡ ಸಿಗುವುದು ದುರ್ಲಭ. ಜುಹೂ ದಂಡೆಯ ಮೇಲೆ, ಅವಾಧವ್ಯವಾದಗಳ ಸುರುಳಿಯಲ್ಲಿ ಸಿಕ್ಕು ನಡುಸಮುದ್ರದ ಭವ್ಯತೆಯಲ್ಲಿ ದಿಕ್ಕಾಪಾಲಾಗಿ ಹೋಗುವ "ಲಾಲೀಪಾಪಿನ" "ಸೆಲೋಫೇನ" ಪಾರದರ್ಶಕ ಕಾಗದದಂತೆ, ವಿಧಿಯು ಯಾರು ಯಾರನ್ನೋ ಎಲ್ಲೆಲ್ಲಿಯೋ ಎತ್ತಿಕೊಂಡು ಎಲ್ಲೆಲ್ಲೋ ತೇಲಿಸಿ ಎಲ್ಲೆಲ್ಲೋ ಮುಳುಗಿಸಿ ಎಲ್ಲರನ್ನೂ ದಿಕ್ಕುಪಾಲು ಮಾಡಿಬಿಡುತ್ತಿತ್ತು. ಹಿಂದೊಮ್ಮೆ ಒಡಹುಟ್ಟಿದವರಿಗಿಂತ ಸಮೀಪದವನಾಗಿ ತನ್ನ ಬಾಲ್ಯದ ಕನಸುಗಳನ್ನು, ರಹಸ್ಯಗಳನ್ನು ತನ್ನ ಜೊತೆಗೆ ಹಂಚಿಕೊಂಡ ನೌಶೇರ್ ಇಂದು ಈ ಕ್ಷಣ ಬಾಳಿನಲ್ಲಿ ಅಪರಿಚಿತ. ಅಂದು ತನ್ನ

ಜೀವನದ ಅತೀ ಭಯಾನಕ ಕ್ಷಣದಲ್ಲಿ ತನ್ನ ಜೊತೆಗಿದ್ದು ಆ ದುರಂತದ ವೇದನೆ
ಯನ್ನು ಕಣ್ಣಾರೆ ಕಂಡ ಅರ್ವೇಶಲ್' ಇಂದು ಅಪರಿಚಿತನಂತೆ ದೂರ ಉಳಿದು, ಎಂದೋ ಒಮ್ಮೆ, ಮನೆ ಮನೆಗೆ ಹೋಗಿ ಟೆರಿಲಿನ್ ತುಂಡು ಬಟ್ಟೆಗಳನ್ನು ಮಾರುವ ಸೇಲ್ಸ್‌ಮನ್‌ರ ಸಲ್ಲಾಪದ ಧಾಟಿಯಲ್ಲಿ ಒಂದು ಪತ್ರ ಬರೆದು, ಮತ್ತೆ ನಿಶ್ಶಬ್ದನಾಗಿ ಬಿಡುತ್ತಾನೆ. ಇಂಥ ಒಂದು ಅತೀ ಸೋತುಹೋದ ನಿರ್ವೀರ್ಯ ಮನೋಸ್ಥಿತಿಯಲ್ಲಿ
ದ್ದಾಗಲೇ ಅವಳು ರಾಮನಾಥನ ದೃಷ್ಟಿಗೆ ಮೊದಲನೆ ಸಲ ಬಿದ್ದದ್ದು..."

ಸಾಪೇಕ್ಷವಾಗಿ ನೋಡಿದರೆ ಇದು ಲಘು ಕತೆಯೆನ್ನಬಹುದಾದ ಇಲ್ಲೂ ಖಾಸನೀಸರ ಕತೆಗಳ ಸ್ಥಾಯಿಯೇನು ಎಂಬುದು ಮರೆಯಾಗಿಲ್ಲವೆಂಬುದು ಲಕ್ಷಿಸ
ಬೇಕಾದ್ದು.

"ಹೀಗೂ ಇರಬಹುದು" ಕತೆ ಮೇಲಿನ ಕತೆಗಿಂತ ಹೆಚ್ಚು ಆಳವಾದುದು. ಗಂಡು ಹೆಣ್ಣಿನ ಸಂಬಂಧದ ಕೆಲವು ಪದರಗಳನ್ನು ಕೆಲವೊಮ್ಮೆ "ತೆರೆಯಿಂದ ಹೊರಗೆ ಬಂದರೆ ಎಂತಹ ಬೀಭತ್ಸ ದೃಶ್ಯವದು". ಈ ಕತೆಯ ಲಕ್ಷ್ಮಣನೂ ತೀವ್ರ ಸಂತಪ್ತ; ತಂದೆ ಶ್ರೀಮಂತನಿದ್ದರೂ ತಂದೆಯಿಂದ ದೂರವಾಗಿ ಬದುಕುತ್ತಿರುವ ನಿಸ್ಸಹಾಯಕ ವಕೀಲ. ಒಂದು ಬಗೆಯ ಪತ್ತೇದಾರಿ ಕತೆಯಂತಿರುವ ಇಲ್ಲಿ ಲಕ್ಷ್ಮಣನ ವೃದ್ಧ ತಂದೆ ನಾಯಕರು ತಾವೇ ತಮ್ಮ ಮನೆಯಲ್ಲೇ ಬೆಳೆಸಿದ ಶಾಮ ಮತ್ತು ಅವರ ಎರಡ
ನೆಯ ಎಳೆಯ ಹೆಂಡತಿ ಅಂಬಕ್ಕ ಇವರ ಮಧ್ಯೆ ಬೆಳೆದ ನಿಗೂಢ ಸಂಬಂಧಗಳು ಲಕ್ಷ್ಮಣನನ್ನು ದಿಕ್ಕುಗೆಡಿಸಿವೆ. ನಾಯಕರನ್ನು ಕೊಂದವ ಶಾಮ ಎಂಬ ಭಾವನೆ ಮೊದಲು ಬರುವಂತಿದ್ದು, ಅದು ಶ್ಯಾಮನನ್ನು ಕೊಲೆ ಮಾಡಿ ಬಳಿಕ ಅವರು ಮಾಡಿ
ಕೊಂಡ ಆತ್ಮಹತ್ಯೆ ಎಂಬುದು ಅಂತ್ಯದಲ್ಲಿ ನಿಶ್ಚಿತವಾಗುತ್ತದೆ. ಇಲ್ಲಿ ಅಗೋಚರವಾಗಿ ಅಚ್ಚಂಭಟ್ಟ ಎಂಬ ಇನ್ನೊಬ್ಬ ಸಂಶಯಾಸ್ಪದ ವ್ಯಕ್ತಿಯೂ ಸುಳಿಯುತ್ತಾನೆ, ಲಕ್ಷ್ಮಣನ ದೃಷ್ಟಿಯಿಂದ, ಒಬ್ಬ "ಅಗ್ಗದ ಹೆಣ್ಣಿನ ಸಲುವಾಗಿ" ಆತನ ತಂದೆ ದುರ್ಮರಣವನ್ನಪ್ಪ
ಬೇಕಾಯಿತು ಎಂಬುದು ನಿಜವಾದರೂ ಆ ವೃದ್ಧ—ಯಾರಿಂದಲೇ ಪ್ರಚೋದನೆ ಬಂದಿರಲಿ—ಆ ಹರೆಯದ ಹುಡುಗಿಯನ್ನು, ಅವರು ಎಂಥವಳೇ ಆಗಿರಲಿ, ಮದುವೆ ಆದುದು ಎಷ್ಟು ಉಚಿತ ಎಂಬ ಪ್ರಶ್ನೆ ಮೂಡುತ್ತದೆ. ಖಾಸನೀಸರು ಅಂಬಕ್ಕನ ಬಗ್ಗೆಯೂ ಸ್ವಲ್ಪ ಸಹಾನುಭೂತಿಯಿಂದ ನೋಡಬಹುದಿತ್ತು. ಹಾಗೆ ನೋಡದಿರು
ವುದು ಈ ಕತೆಯ ಒಂದು ಚಿಕ್ಕ ದುರ್ಬಲಕೊಂಡಿ ಎನ್ನಿಸುತ್ತದೆ.

"ತಬ್ಬಲಿಗಳು" ಮತ್ತು "ಅಲ್ಲಾವುದ್ದೀನ್ ಅದ್ಭುತ ದೀಪ" ಇವು ನನ್ನನ್ನು ಮಾನಸಿಕವಾಗಿ ಬಹು ತಬ್ಬಿಬ್ಬು ಮಾಡಿರುವ ಕತೆಗಳು. ಇವೆರಡರ ಹಿಂದೆ ಬದುಕಿನ ಬಗ್ಗೆ ಅದರ ದುರಂತದ ಬಗ್ಗೆ ಗಾಢ ಚಿಂತನೆಗಳಿವೆ. ಆಧುನಿಕಪೂರ್ವ ಕಾಲದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಖಚಿತ ವಿಳಾಸವಿತ್ತು. ಇಂದು ಆ ವಿಳಾಸವನ್ನು ಕಳೆದುಕೊಂಡಿರುವುದು ಆಧುನಿಕ ಜೀವನದ ದೊಡ್ಡ ದುರಂತಗಳಲ್ಲೊಂದು. ವಾಸು

ವಿಳಾಸವೆಂದು ಹೇಳಲು ಬಾರದ ವಿಳಾಸವನ್ನು ಹಿಡಿದು ಪುಣೆ ನಗರದಲ್ಲಿ ತನ್ನ ಚಿಕ್ಕಪ್ಪನನ್ನು ಹುಡುಕಲು ಹೋಗಿ ಅಲ್ಲಿ ತನ್ನನ್ನೇ ಕಳೆದುಕೊಳ್ಳುವಂತಹ ಸ್ಥಿತಿಗೆ ಬರುವುದು ಎಷ್ಟು ಧ್ವನಿಪೂರ್ಣ ! ('ಅಲ್ಲಾವುದ್ದೀನನ ಅದ್ಭುತ ದೀಪ' ಕಥೆ) ವಾಸುವಿನ ಚಿಕ್ಕಪ್ಪ ಸತ್ಯಬೋಧ (ಹೆಸರು ಗಮನಾರ್ಹ). ಅವನು ಯಾವುದೋ ಕುತಂತ್ರಕ್ಕೆ ಒಳಗಾಗಿ ಅಪವಾದವನ್ನು ಹೊತ್ತು ಊರು ಬಿಟ್ಟು ಹೋಗಿದ್ದಾನೆ. ಅವನ ವಿಳಾಸ ತಿಳಿಯದು: ಆದರೂ ವಾಸು ಏನೂ ಸಹಾಯಕವಾಗದ ಒಂದು ವಿಳಾಸದೊಡನೆ ಪುಣೆಗೆ ಬಂದಿದ್ದಾನೆ. ಪುಣೆಯಲ್ಲಿ ಈ ಹಳ್ಳಿಯ ಮುಗ್ಧ ಹುಡುಗ ಸತ್ಯಬೋಧನನ್ನು ಹುಡುಕಿಕೊಂಡು ಹೋದರೆ, ಎಲ್ಲಿ ಸಿಗಬೇಕು ? ಈ ವಕ್ರ ಅರ್ಥಹೀನ ಬದುಕಿನಲ್ಲಿ ಕಳೆದು ಹೋಗಿರುವ ಮೌಲ್ಯದ ಸಂಕೇತವಾಗುತ್ತಾನೆ ಸತ್ಯಬೋಧ. ಅದನ್ನು ಹುಡುಕುವ ವಾಸುವೂ ಕೂಡ ಪುಣೆಯಲ್ಲಿ ನಗೆಗೀಡಾಗುತ್ತಾನೆ. ಅವನಿಗೆ ಅವನೇ ಕಳೆದುಕೊಂಡು ಬಿಡುತ್ತಾನೆ; ಅವನನ್ನೇ ಹುಡುಕಿಕೊಳ್ಳಬೇಕಾಗುತ್ತದೆ. ವಾಸುವಿನ ಹುಡುಕಾಟದಲ್ಲಿ ಪುಣೆ ನಗರದ ಬದುಕಿನ ವಿವಿಧ ಮುಖಗಳು ಕಾಣಸಿಗುತ್ತವೆ. ಹಗಲು ಝಗ ಝಗ ಬೆಳಗುತ್ತಿದ್ದ ಅಲಕಾ ಟಾಕೀಸಿನ ಅಲ್ಲಾವುದ್ದೀನನ ಅದ್ಭುತ ದೀಪದ ಚಿತ್ರ ರಾತ್ರಿ ಬಹು ಹೊತ್ತಾದ ಮೇಲೆ ಆರಿ, ಆ ಚಿತ್ರವನ್ನು ಯಾವನೋ ಕಿತ್ತು ಹಾಕುವ ಸಂಕೇತವೂ ಇಲ್ಲಿ ಗಮನಾರ್ಹವಾಗುತ್ತದೆ. ಅಲಕಾಟಾಕೀಸು ಭ್ರಮೆ ಹುಟ್ಟಿಸುವ ಸುಂದರ ಬದುಕಾಗುತ್ತದೆ. ವಾಸುವಿಗೆ ಪುಣೆಯ ನಗರ ತಿರುಗಿ, ಸತ್ಯಬೋಧ ಸಿಗದೆ, ನಿರಾಸೆಯಿಂದ ರಾತ್ರಿ ಮಲಗಿದಾಗ ಅವನಿಗೆ ಬೀಳುವ ಕನಸಿನಲ್ಲಿ ಅವನು ಸಮಾಧಾನ ಕಾಣುತ್ತಾನೆ : ಹೀಗೆ ಕನಸು ಕಾಣುವುದೊಂದೇ ಆಧುನಿಕ ಜಗತ್ತಿನ ಸಂವೇದನಾಶೀಲ ವ್ಯಕ್ತಿಗೆ ಬದುಕಿ ಉಳಿಯಲು ಇರುವ ಏಕೈಕ ಮಾರ್ಗವೋ ಏನೋ ಎಂದು ಅನ್ನಿಸುತ್ತದೆ. ವಾಸುವಿನ ಶೋಧ, ಅವನ ಅನುಭವಗಳು, ಅವನು ಎಲ್ಲ 'ಬಸ್ಸಿನ ದಾರಿಗಳು ಬಂದು' ಮುಗಿಯುವ ಸ್ಟ್ಯಾಂಡಿಗೆ ರಾತ್ರಿ ತಲುಪಿದ್ದು ಎಲ್ಲವೂ ಅಯಾಚಿತವಾಗಿ ಏನೋ ಅರ್ಥವನ್ನು ಪಡೆದುಕೊಳ್ಳುತ್ತವೆ.

ಧಾರ್ಮಿಕ ಕೇಂದ್ರವಾದ ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳ ಮಠ ಮೇಲಿನ ಕತೆಯಲ್ಲಿ ಬಂದಿರುವ ಪುಣೆಯಂತೆ "ತಬ್ಬಲಿಗಳು" ಕತೆಯಲ್ಲಿ ಹಿನ್ನೆಲೆ ಒದಗಿಸುತ್ತದೆ. ಅಲ್ಲಿಗೆ ಬಂದಿರುವ ನಾಲ್ವರು—ತಂದೆ, ತಾಯಿ, ತಮ್ಮ ತಂಗಿ, ಹೆಸರಿಗೆ ಪರಸ್ಪರ ಭಾವುಕ ಸಂಬಂಧಗಳನ್ನು ಹೊಂದಿರುವಂತೆ ಕಂಡರೂ ವಾಸ್ತವದಲ್ಲಿ ಏನೋ ಒಂದು ಅನಿವಾರ್ಯ ಕಾರಣಕ್ಕಾಗಿ ಒಬ್ಬರನ್ನೊಬ್ಬರು ಅವಲಂಬಿಸಿದಂತೆ ಕಂಡು ಸಮಯ ಸಿಕ್ಕೊಡನೆ ಬೇರೆಯಾಗಲು ಯೋಚಿಸುತ್ತಿರುವವರು. ಅವರಿಗೆ ಹೆಸರಿಲ್ಲ—ಅವರೆಲ್ಲ ಮಾದರಿಗಳೇ ಹೊರತು ವ್ಯಕ್ತಿತ್ವ ಇರುವವರಲ್ಲ. ಸರ್ಕಸ್ಸಿನಲ್ಲಿ ಜೋಕಾಲಿ ಆಡುವವರು ಒಬ್ಬರನೊಬ್ಬರು ನಂಬಿಕೊಂಡಿರುವಂತೆ ಅವರು ಪರಸ್ಪರ ನಂಬಿಕೊಂಡಿದ್ದಾರೆ —ಇದೇ ಆಟ ಹೊಟ್ಟೆಪಾಡಿಗೂ ಮತ್ತು ಒಬ್ಬ ಇನ್ನೊಬ್ಬನನ್ನು ಹಿಡಿದಿರಲೇಬೇಕು—

ಆದರೆ ಅವನ ಸಂಬಂಧ ಕೇವಲ ಔಪಚಾರಿಕ. ಇಲ್ಲೆಲ್ಲ ಬದುಕನ್ನು ನಿಜವಾಗಿ ಎದುರಿಸಿರುವವಳು ತಮ್ಮನ ಹೆಂಡತಿ—ಅವಳು ಆತ್ಮಹತ್ಯೆ ಮಾಡಿಕೊಳ್ಳುವುದರ ಮೂಲಕ ತನ್ನತನವನ್ನು ಸ್ಥಾಪಿಸಿಕೊಳ್ಳುತ್ತಾಳೆ. ಉಳಿದವರು ಏನೇನೋ ಸಂಬಂಧ ಸಬೂಬುಗಳನ್ನು ಹೇಳಿಕೊಂಡು ಮಂತ್ರಾಲಯಕ್ಕೆ ಬರುತ್ತಾರೆ; ತಂಗಿಗೆ ಹುಚ್ಚು ನಿಂತರೆ ಸಾಕು, ತಮ್ಮನದೇ ಬೇರೆ ಯೋಚನೆ, ತಂದೆ ತಾಯಿಯದೇ ಬೇರೆ ಯೋಚನೆ. ಧಾರ್ಮಿಕ ಕೇಂದ್ರದಲ್ಲೂ ಪ್ರತಿಯೊಬ್ಬನಿಗೂ ತನ್ನ ಸ್ವಾರ್ಥವನ್ನೇ ಚಿಂತಿಸುತ್ತ ತನ್ನನ್ನು ತಾನು ಹೊರಗಿಟ್ಟುಕೊಳ್ಳುತ್ತ ಹೋಗುತ್ತಾನೆ. ರಥ, ಜನಸಮೂಹ, ಅದರ ಮಧ್ಯೆ ಸಿಕ್ಕ ತಮ್ಮ ಜನಪ್ರವಾಹದ ವಿರುದ್ಧ ಹೊರಬರಲು ಚಡಪಡಿಸುವುದು ಮತ್ತೆ ಏನನ್ನೋ ಬೇರೆ ಹೇಳುತ್ತಿದೆಯೆಂಬುದು ಸ್ಪಷ್ಟವಾಗಿದೆ. ಹೊರ ತೋರಿಕೆಗಳನ್ನು ದಿಟ್ಟವಾಗಿ ಹರಿದುಹಾಕುವುದರ ಮೂಲಕ ಜೀವನದ ಒಳವಾಸ್ತವ್ಯಗಳನ್ನು ಖಾಸನೀಸರು ನಮ್ಮ ಮುಂದೆ ಬಿಚ್ಚಿಡುತ್ತಿದ್ದಾರೆ ಎಂದು ಅನ್ನಿಸುತ್ತದೆ.

ಕತೆಗಾರರಾಗಿ ಖಾಸನೀಸರಿಗೆ ಭಾಷೆ ಸಿದ್ಧಿಸಿದೆ. ಮನಸ್ಸಿನ ಸೂಕ್ಷ್ಮ ವ್ಯವಹಾರಗಳನ್ನು ಅವರ ಪದರ ಪದರಗಳನ್ನು ಭಾಷೆಯಲ್ಲಿ ಹಿಡಿದಿಡಬಲ್ಲರು. ಹಾಗೆಯೇ ಹೊರಗಿನ ಸೂಕ್ಷ್ಮ ವಿವರಗಳನ್ನು, ಅವರಿಗೆ ಎಷ್ಟು ಸುಲಭವಾಗಿ ವಸ್ತುಗಳು ಒಂದು ಕ್ಷಣಕ್ಕೇ ಪ್ರತಿಮೆಯಾಗಿಬಿಡುತ್ತವೆ! "ಕಪ್ಪಾದ ದೊಡ್ಡ ದೊಡ್ಡ ಬಂಡೆಗಳು ಕಬ್ಬಿಣದ ತುಂಡುಗಳಂತೆ ಬಿದ್ದಿವೆ; ನದಿಯಿಂದ ಮಠಕ್ಕೆ ಹೋಗುವ ಆ ದಾರಿಯು ಆ ಬಂಡೆಗಳ ಮೇಲೆ ಹಾಯ್ದು ಹೋಗಿವೆ"; "ಎದುರಿಗೆ ನದಿ ಅಡ್ಡಗಟ್ಟಿ ನಿಂತಿತ್ತು. ಹಿಂದೆ ದೂರದಲ್ಲಿ ಮಠದ ಗೋಡೆಗಳು ಭವ್ಯವಾಗಿ ಎತ್ತರವಾಗಿ ನಿಂತು ಜೇಲಿನ ಗೋಡೆಗಳಾಗಿ ಅವಳನ್ನು ಹಿಂದೆ ಹೋಗಗೊಡಲೊಲ್ಲವು"; "ತಂಗಿಯು (ರಥದ) ಗಾಲಿಯನ್ನು ಗಟ್ಟಿಯಾಗಿ ಅಮುಕಿಕೊಂಡು ಸ್ಮೃತಿ ತಪ್ಪಿದಂತಿದ್ದಾಳೆ"; "ತಾನು ಹೊಕ್ಕ ಒಂದ ಮನೆಗಳಲ್ಲಿಯು ಜೀವನವೆಲ್ಲ ಎಷ್ಟು ನೀರಸವಾಗಿತ್ತು. ಹೊರಕೋಣೆಗಳಲ್ಲಿ ಇಲ್ಲದ ಆಡಂಬರ ತೋರಿಸುವ ಸುಖವಸ್ತುಗಳ ಪ್ರದರ್ಶನವಿರುತ್ತಿತ್ತು, ಹಾಗೂ ಒಳಕೋಣೆಯಲ್ಲಿದ್ದ ಮೇಲ್ಭಾಗದಲ್ಲಿ ಹಳೆಯ ಮುರುಕುಲ ವಸ್ತುಗಳನ್ನೆಲ್ಲ ಅಸ್ತವ್ಯಸ್ತವಾಗಿ ಏರಿಸಿಟ್ಟಿರುತ್ತಿದ್ದರು"—ಇವನ್ನೆಲ್ಲ ಪರಿಭಾವಿಸಬೇಕು.

ಖಾಸನೀಸರು ತಮ್ಮ ಲೇಖಣಿಗೆ ವಿಶ್ರಾಂತಿಯನ್ನು ಕೊಡಬಾರದೆಂದು ಎಲ್ಲ ಸಹೃದಯರ ಪರವಾಗಿ ನಾನು ಮನವಿ ಮಾಡಿಕೊಳ್ಳುತ್ತೇನೆ. ಅವರಿಗೆ ಕತೆಗಾರರಾಗಿ ಕೀರ್ತಿ ಪಡೆಯುವಲ್ಲಿ ಅನಾಸಕ್ತಿ ಇರಬಹುದು. ಆದರೆ ಅವರ ಕತೆಗಳನ್ನು ಪಡೆಯಲು ಓದುಗರು ಬಯಸಿದ್ದಾರೆ, ಎಂಬುದು ಅವರಿಗೆ ಪ್ರಚೋದನೆಯಾಗಲಿ, ಕತೆಗಳನ್ನು ಬರೆಯುವುದರ ಮೂಲಕ ಅವರ ಮನಸ್ಸು ದೇಹ ಹಗುರವಾಗಿ ಅವರು ಇನ್ನಷ್ಟು ತಮ್ಮ ಆಯುಷ್ಯವನ್ನು ಹೆಚ್ಚಿಸಿಕೊಳ್ಳುತ್ತಾರೆ ಎಂಬ ಸಂಗತಿಯಾದರೂ ಅವರಿಗೆ ಹೆಚ್ಚು ಕತೆ ಬರೆಯಲು ಪ್ರಚೋದನೆಯಾಗಲಿ.

## ತಿಂಗಳ ಕಾವ್ಯ

# ಯುವ್ವಾ ಭಾರತೀ

ಯುವ್ವಾ ಭಾರತೀ
ನನಗ ದಿಗಲಾಗೇತಿ
ಏ। ಹ್ಯಾಂಗಾರss ತಡಕೊಂತಿ ?

ತಲಿಗೊಂದೊಂದ ಜಾತಿ
ಕಲ್ಲಿಗೊಂದೊಂದ ದೇವರಾ ಮಾಡಿ
ಗುದ್ಯಾಡೂ ಮಕ್ಕಳಾ
ಮಂಡಲಾಗಿಟಗೊಂಡ
ಹ್ಯಾಂಗಾರss ಮುದ್ದಾಡತಿ ?
ಖಬರಗೆಟ್ಟ ಕನಸ ಕಾಣಕೊಂತ
ಮಲಗಿದ ರಣಗೇಡಿ ಮಕ್ಕಳನ
ಎಬ್ಬಿಸೇನಂತಿ
ಬಾಳೇಕ ಹಚ್ಚೇನಂತಿ.

ತಮ್ಮ ತಮ್ಮ ತಿಟವಾಟದಾಗ
ತಾಯೀ ಹೊಟ್ಟೇನss ಕೊಯ್ದ,
ಹಂಚಿಕೊಳ್ಳೋ ಈ ಮಕ್ಕಳಿಗೆ
ಕಟಿಗೀ ಹೊರಿ
ತರಿಸಿ, ಮುರಿಯಾತ್ತುಚ್ಚಿ ಒಕ್ಕಟ್ಟಿನ
ಕಥಿ ಹೇಳಿದ ಆ ಮುಂದಕನ
ಉದಾಹರಣೆ ಕೊಟ್ಟೇನಂತಿ
ದಾರೀಗಿ ಹಚ್ಚೇನಂತಿ.

ನಿನ್ನ ತೇರಿನ ಗಾಲೀ
ಕುರುಡ-ನಂಬಿಕೀ ಕೆಸರಾಗ
ಹುಗದೇವಿ
ಇಷ್ಟಾದರೂ ಯುವ್ವಾ

---

ಧರಣೇಂದ್ರ ಕುರಕುರಿ, ಹಿಂದೀ ಅಧ್ಯಾಪಕ, ಶ್ರೀ ಕುಮಾರೇಶ್ವರ ಪದವಿ ಕಾಲೇಜು, ಹಾನಗಲ್ಲ-581 104.

ನಮ್ಮನ್ನ ಅಂವಚಿಗೊಂಡೇನಂತಿ
ಪ್ರೀತಿ
ಸುರದಂ ಸಲುವೇನಂತಿ
ಬೆಳಸೇನಂತಿ.

ನಿಂದೂ ಗರಡ ಕುವ್ವತ್ತು
ಮಕ್ಕಳ ಕಾಲಾಗ ಗಂದಮುರದಿ
ಹಾಕೇ ಹಾಕತಿ
ನಿನಗ ನಾವು ಒಂದ ಹೊಳೀ ಚಿಂತಿ.

ಏನ ಆದರೂ ಯವ್ವಾ
ನಾವೆಲ್ಲಾರೂ ನಿನ್ನ ಮಕ್ಕಳ
ಅನೋದು ಸುಳ್ಳ ಆದೀತ ?
ಕಳ್ಳಿನ ಬಳ್ಳಿ ಹರದ ಹೋದೀತ ?
ಅದಕs ನಮ್ಮ ತಪ್ಪು ಮನ್ನಿಸ ತಾಯಿ
ಅಂದರ ಸುಮಾಕ ಯಾಕ
ಕುಂತಿ ?

—ಧರಣೇಂದ್ರ ಕುರಕುರಿ

# ಮೋಟರ ಬೈಕಿನ ಪ್ರಸಂಗ

ಊರಿನಾಚೆಗೆ ಕೆರೆಯ ಮೇಲಿನ ಭಾಗ
ಹಸಿರು ಹುಲ್ಲಿನ ಬ್ಯಾಣ
ನಿಂತು ನೋಡಿದರೂಳ ತುದಿಗೆ
ಒಂದು ಸುಂದರ ತಾಣ.

ಬಿಸಿಲು ಏರುವ ಹೊತ್ತು
ಹಸುಗಳೊಂದಿಗೆ ಹೊರಟಿದ್ದನಲ್ಲಿಗೆ ದನ ಕಾಯ್ವ ಹುಡುಗ
ಬೆಚ್ಚಿ ಬಿದ್ದನು ಒಮ್ಮೆ
ಮೋಡವಿಲ್ಲದಿದ್ದರೂ ಕೇಳಿ ಬಂದ ಗುಡುಗ.

ಬಂದಗದ್ದೆ ರಾಧಾಕೃಷ್ಣ, ಕೆಳದಿ ಹಂಚೆ,ಸಾಗರ (ತಾ) ಶಿವಮೊಗ್ಗ ಜಿಲ್ಲೆ.

ಹೆದರಿ ಚದುರಿದವು ಹಸುಗಳು
ಮೋಟರ ಬೈಕಿನ ಸದ್ದ ಕೇಳಿ
ಹೆಕ್ಕುತಿದ್ದ ಕಾಳ ಬಿಟ್ಟು
ರೆಕ್ಕೆಯ ಬಡಿಯುತ ಹಾರಿತು ಕೋಳಿ.

ಓಡಿತು ಮೋಟರ ಬೈಕು
ರಸ್ತೆಯು ನಡುವೆ ಗುಟುಗುಡುಗುಟ್ಟಿ
ಕಸಿವಿಸಿಗೊಂಡನು ಹುಡುಗ
ನೋಡುತ ಅದನು ದುರುದುರುಗುಟ್ಟಿ

ಮೋಟರಬೈಕೋಡಿತು ಮುಂದೆ
ಕಾರುತ ಹಿಂದಕ್ಕೆ ಹೊಗೆ
ನೋಡಿತು ಹಳ್ಳಿಗೆ ಹಳ್ಳಿಯೆ
ಬೆಚ್ಚಿ, ಬೆರಳ ಕಚ್ಚಿ, ತುಟಿ ಮುಚ್ಚಿ–ಹೀಗೆ ಹಲವು ಬಗೆ.

—ಬಂದಗದ್ದೆ ರಾಧಾಕೃಷ್ಣ

## ಸದಾ ನಿಮ್ಮೊಡನೇ ಇರುವೆ

ಕೊನೇ ಮಾತು ನನ್ನ ಜನರೇ
ಮಾತಲ್ಲಿ ಕಹಿಯಿಲ್ಲ.

ನೆನಪಿಡಿ
ನಾಳೆ ನ್ಯಾಯಸ್ಥಾನದಲ್ಲಿರುವುದು ಇತಿಹಾಸ.
ಭವಿಷ್ಯ ನಮ್ಮದಿದೆ
ಭವಿಷ್ಯ ದುಡಿಯುವವರದು.

ಹಿಂಸೆಗೊಳಪಟ್ಟವರೇ
ಚಿಲಿಯ ಹೃದಯಂಗಳೇ
ಕರಾಳ ಫ್ಯಾಸಿಜಮ್ಮಿನಿಂದ

ರಮಜಾನ್ ದರ್ಗಾ, ಉಪಸಂಪಾದಕ, ಪ್ರಜಾವಾಣಿ, ನಂ, 75 ಎಂ.ಜಿ. ರಸ್ತೆ, ಬೆಂಗಳೂರು-1.

ಸೇತುವೆ – ರೈಲ್ವೆ – ಎಣ್ಣೆಗೊಳವೆ
ಹಾಳಾದಿವೆ.

ಬಾನುಲಿ ಬಂದಾಗಿದೆ – ಮೌನವಾಗಿದೆ
ಬಾಂಬುದಾಳಿಗೀಡಾಗಿ
ನನ್ನ ದನಿ ಕೇಳಿಸದಂತಾಗಿದೆ.

ನಾನೊಬ್ಬ ಕೇವಲ ಮನುಷ್ಯ
ನ್ಯಾಯದ ಮಹಾಬಯಕೆಗಳಿಗೆ
ಬಾಯಿಯಾದವ.

ಬರ್ಬರರು ಮಾಡಿದ
ದಾರುಣ ಸ್ಥಿತಿಯ ಮುಂದೆ ನಿಂತು
ಹೇಳುತ್ತಿರುವೆ.

ಸತ್ತರೂ ನಾ
ಬಿಟ್ಟುಕೊಡಲಾರೆ
ಸಮಸ್ತ ಜನತೆಯ ಸೊತ್ತನ್ನು
ನನ್ನ ಚಿಲಿಯನ್ನು

ಚಿಲಿ ಸತ್ತಿಲ್ಲ – ಸಾಯುವುದಿಲ್ಲ
ಅದು ಬರಿ ಗಾಯಗೊಂಡಿದೆ.

ಒತ್ತಾಯದಿಂದ ಅಪರಾಧದಿಂದ
ಆಳಲಾರರು ವೈರಿಗಳು.

ನಾ ಸತ್ತರೇನು!
ನಿಷ್ಠೆಗೆ ನಿಷ್ಠೆ ತೋರಿದ
ಯೋಗ್ಯ ಮನುಷ್ಯನ ನೆನಪು
ಉಳಿಯುವುದು ಸದಾ
ನಿಮ್ಮೊಡನೇ ಇರುವೆ.

—ರಮಜಾನ್ ದರ್ಗಾ

# ಕ್ರಾಂತಿ ರಥಕ್ಕೆ ಕೀಲೆಣ್ಣೆ

ಕವನಗಳಿಗೆ ಕ್ರಾಂತಿ ಹುಟ್ಟಿಸುವಷ್ಟು
ಕಸುವಿಲ್ಲ ಗೆಳೆಯ
ಕಸುವಿದೆಯೆಂದು ಹೊರಟರೆ
ಮಿಥ್ಯೆಯ ಬೆನ್ನೇರಿ ಹೊರಟ ಸವಾರಿ
ಭ್ರಮಾಗಿರಿಯ ಶಿಖರವೆ ಅದರ ಗುರಿ.

ನಡೆಯ ಬಿಡದಿರು ಗೆಳೆಯ
ನಿನ್ನ ಹುಚ್ಚುಕುದುರೆಯ
ಅಮೂರ್ತ ಲೋಕದ ಕಡೆಗೆ
ವಾಸ್ತವದ ಕಡಿವಾಣ ತೊಡಿಸಿ
ಹಿಡಿದೆಳೆದು ನಡೆಸು ಅದ
ಮೂರ್ತ ಲೋಕದ ಕಡೆಗೆ.

ಹಗಲಿನಲಿ ಆನೆ ಕಂಡ ಹಾಗೆ
ಇಲ್ಲೆಲ್ಲ ಸ್ಪಷ್ಟ ನೋಟ, ಆದರೂ
ಸಿದ್ಧಾಂತಕ್ಕೆ ಬುದ್ಧಿ ಅಡವಿಟ್ಟ ಮನಕ್ಕೆ
ಇಲ್ಲೂ ಕೂಡ ಅಸ್ಪಷ್ಟ ನೋಟ
ಕಣ್‌ಪಟ್ಟಿ ಕಟ್ಟಿದ ಕುದುರೆಗೆ
ಕಾಣುತ್ತದೇನು ಅಕ್ಕ ಪಕ್ಕ.

ಕಣ್‌ಪಟ್ಟಿ ಕಳಚಿಟ್ಟು ನೋಡು ಗೆಳೆಯ :
ಇವು ಭಾವಗೀತೆಗಳು
ತುಳುಕಿಸುತ್ತವೆ ಭಾವದ ಹೊನಲು
ಅವು ಪ್ರೇಮ ಕವಿತೆಗಳು
ಚಿಮ್ಮಿಸುತ್ತವೆ ರಸಿಕತೆಯ ಕಾರಂಜಿ
ಇದು ಅಂತರ್ಮುಖಿ ಕವನ
ಮಾಡಿಸುತ್ತದೆ ಚಿಂತನೆಯ ಮಂಥನ

---

ಎನ್.ಆರ್. ವಿಶುಕುಮಾರ್, ನಂ 477, 64 ನೇ ಕ್ರಾಸ್, ರಾಜಾಜಿನಗರ 5ನೇ ವಿಭಾಗ, ಬೆಂಗಳೂರು-560 010.

ಅದು ಬಹಿರಮುಖಿ ಕವನ
ನೀಡುತ್ತದೆ ಬಹಿರ್ದಿಶೆಯ ನಂತರದ ನಿರಾಳತನ.

ಮರ್ತ್ಯಲೋಕದ ಸ್ವಪ್ನ ನೋಟದ
ನಂತರವೂ ಬೇಡ ಶಂಕೆ ಗೆಳೆಯ
ಕವನ ಎಂದೂ ಆಗದು
ಕ್ರಾಂತಿ ರಥ ಎಳೆಯುವ ಕುದುರೆ
ಹೆಚ್ಚೆಂದರೆ, ಕವನ
ಕ್ರಾಂತಿ ರಥಕ್ಕೆ ಕೀಲೆಣ್ಣೆ.

—ಎಸ್. ಆರ್. ವಿಶುಕುಮಾರ್

## ಬೆಟ್ಟಗಳೇ ಹೀಗೆ –,

ಗುರು ಬಂದ ನಾ ಮನೆಯೊಳಗೆ ಹೋಗುವ ಮೊದಲೆ
ಗುರುವಿನ ಗುರು ಜೋಡಿ ಕೂಡಿ
ಹಸಿರನ್ನೆ ಉಸಿರಾಡುವ ತೋಟದಿ ಗೊನೆ ತುಂಬಿದ
ಮರ ಮರವನ್ನೆ ಹತ್ತಿದ ನೋಡಿ,

ಉತ್ತಲೇಖನ ಬರೆದುಕೊಳ್ಳಲು ಅಣಿಯಾಗಿ
ಬರುವಂತೆ ಕರೆದ
ಅವ್ವ ತಟ್ಟಿದ ರಾಗಿರೊಟ್ಟಿಯ ತಿನ್ನುತ
ಮನಬಿಚ್ಚಿ ಮಾತಾಡಿದ.

ಕೊಪ್ಪಲಿನೊಳಗಿನ ಗಡಿಗೆಗೆ ಕೈಹಾಕಿ ಕರಿಸಿದ್ಧನ
ಒಪ್ಪದ ನೀರ ನಾ ಕೆಡಿಸಿದೆ
ಒಪ್ಪಾದಿ ಹೂಡಿದ್ದ ಒಲೆಗುಂಡಿವಾ ಮೇಲೆ ತಪ್ಪಲಿ
ಕುದಿ ಕಂದಿದೂ ಮರಳಿದ್ದ ಕಂಡು ಎಚ್ಚರಾದೆ !

---

ಎಸ್. ಜಿ. ಸಿದ್ಧರಾಮಯ್ಯ, ಕನ್ನಡ ಅಧ್ಯಾಪಕ, ಸರ್ಕಾರಿ ಕಾಲೇಜು, ಮಡಿಕೇರಿ.

ಬೆಳ್ಳಾನೆ ಬೆಳಗಲ್ಲಿ ರಾಗಿರೊಟ್ಟಿಯೂ ಇಲ್ಲ
ತಟ್ಟುವವನು ಇಲ್ಲ ಭಾವಗೀತೆಯ ಸಾರ
ಹೇಳಿ ಬರೆಸಲು ಬಂದ ಗೇರು ಬಂದ ನೆನಪಷ್ಟೆ.

—ಎಸ್.ಜಿ. ಸಿದ್ಧರಾಮಯ್ಯ

## ಮೌನದ ಮೊಗ್ಗಿನಲ್ಲಿ ... ...

ಬಹುದಿನಗಳ ನಂತರ ನನ್ನ
ನಗೆಮುಗಿಲಿಗೆ ಮೀಣೆಯಾಗಿ ಬಂದ
ನಿನಗೆಲ್ಲ ಹೇಳಬೇಕೆನಿಸುತ್ತಿದೆ ಈಗ
ಎದೆಯಲ್ಲಿ ಹುಟ್ಟಿರುವ ಹುತ್ತಗಳಕತೆಯ !
ಹುದುಗಿ ಹೋದ ಅಂತರಂಗದ ಶಬ್ದಗಳಿಗೆ
ದನಿನೀಡಿ ಚೇತನದ ಹೂವಾಗುತ್ತಿರುವ
ನಿನ್ನೆದಿರು ತೆರೆಯಬೇಕೆನಿಸುತಿದೆ ಬದುಕಿನ ಪುಟಗಳ !
ಆದರೆ ನಿನ್ನ ಭರವಸೆಯ ನೋಟ ಕಂಡರೂ
ಹೇಳುವ ಪರಿಯೇ ತಿಳಿಯುತ್ತಿಲ್ಲ! (?)
ತಲೆ ಎತ್ತುತ್ತೇನೆ, ಅಲ್ಲಿ ಬಿಳಿಯ ಮುಗಿಲುಗಳು
ಭರವಸೆಯ ನೋಟವೆಸೆದು ಸಾಗುತಿವೆ ಮುಂದೆ,
ದೀರ್ಘವಾಗಿ ನೋಡುತ್ತೇನೆ ಕಡಲ ಅಲೆಗಳನ್ನು
'ಹೇಳಿಬಿಡು' ಎಂದು ನಿಲ್ಲದೆ ಓಡುತಿವೆ ಹಿಂದೆ !
ಕೊನೆಗೂ ಹೇಳಲೇಬೇಕೆಂದು ನಿರ್ಧರಿಸಿ
ನಿನ್ನತ್ತ ನೋಡಿದರೆ ....
ನಿನ್ನ ಕಣ್ಣುಗಳಲ್ಲಿರುವ ಅಸಮಾಧಾನತೆಯನ್ನು ಗುರುತಿಸುತ್ತೇನೆ !
ತುಟಿಯವರೆಗೆ ಬಂದ ಮಾತು
ತಿರುಗಿ ಬಂದ ದಾರಿ ಹಿಡಿದಾಗ ದಾರಿಗಾಣದೆ
ನಿಟ್ಟುಸಿರಿನೊಂದಿಗೆ ಕೊನೆಗೂ ಹೇಳುತ್ತೇನೆ
ಕ್ಷಮಿಸು, ನಾನೇನು ಹೇಳಲೂ ...
ಮಾತುಗಳು ಉಳಿದಿಲ್ಲ.

—ಹೆಚ್.ಕೆ. ಗಿರಿಜಾ

ಹೆಚ್.ಕೆ. ಗಿರಿಜಾ, ಪಿ.ಟಿ. ವಿದ್ಯಾರ್ಥಿನಿ, ಸರ್ಕಾರಿ ವೆನ್‌ಲಾಕ್ ಆಸ್ಪತ್ರೆ, ಮಂಗಳೂರು.

# ಒಳನೋಟ

ಪ್ರಿಯ ಶೂದ್ರ,

ಒಬ್ಬ ವ್ಯಕ್ತಿಯ ಹೆಸರನ್ನು ಮುಂದೆ ಮಾಡಿ ಒಂದು ಸಿದ್ಧಾಂತವನ್ನೂ, ಒಂದು ಘಟನೆಯನ್ನೂ ಯಾರಾದರೂ ಗುರುತಿಸಿದಾಗ ನನ್ನ ಮೈ ಉರಿಯುತ್ತದೆ. ಈ ವ್ಯಕ್ತಿ ದರ್ಜೆಯ Philosophy ನೀತ್ಸೆಯ ಸೂಪರ್‌ಮ್ಯಾನ್‌ನ ಕಲ್ಪನೆಯಿಂದಲೇ ಬರುವಂತಹದು, ಇಂತಹ ಯಾವುದೇ ಕಲ್ಪನೆ ಪ್ರಜಾಪ್ರಭುತ್ವದ ತತ್ವಕ್ಕೆ ಸಂಪೂರ್ಣ ವಿರೋಧಿ. ಆದುದರಿಂದಲೇ ತಮ್ಮ ಪಕ್ಷವನ್ನು ಇಂದಿರಾ ಕಾಂಗ್ರೆಸ್ ಎಂದು ಹೇಳಿಕೊಳ್ಳುವವರಿಗೂ ತಮ್ಮ ಸಿದ್ಧಾಂತವನ್ನು ಲೋಹಿಯಾ ಸಿದ್ಧಾಂತ ಎಂದು ಹೇಳಿಕೊಳ್ಳುವವರಿಗೂ ನನಗೆ ವ್ಯತ್ಯಾಸವೇ ಕಂಡು ಬರುವುದಿಲ್ಲ. ಇಬ್ಬರೂ ತಮ್ಮ ಮನಸ್ಸಿನ ಅಂತರಾಳದಲ್ಲಿ ಮೂಲಭೂತವಾಗಿ ಪ್ರಜಾಪ್ರಭುತ್ವ ವಿರೋಧಿಗಳೇ. ಉದಾಹರಣೆಗೆ ನೋಡು, ಸಂಭವಾಮಿ ಯುಗೇ ಯುಗೇ ಎಂಬಂತೆ ಇವರೂ ಕೂಡ ಲೋಹಿಯಾ ಇದ್ದಿದ್ದರೆ ಎಂಬ ಉದ್ಗಾರ ತೆಗೆಯುತ್ತಾರೆ.

ವ್ಯಕ್ತಿಯನ್ನೇ ಕೇಂದ್ರವಾಗಿಟ್ಟುಕೊಂಡು ಯೋಚಿಸುವ ಇಂತಹ ಜನ ಇತಿಹಾಸದ ಆಗು–ಹೋಗುಗಳಿಗೆ ವ್ಯಕ್ತಿಗಳಲ್ಲೇ ಕಾರಣಗಳನ್ನು ಕಂಡು ಹಿಡಿಯಲು ತಲೆ ಕೆಡಿಸಿಕೊಂಡು ಪ್ರಯತ್ನಿಸುತ್ತಾರೆ. ಆದುದರಿಂದಲೇ ಈ ದೇಶದಲ್ಲಿ ಆದಂತಹ ಎಲ್ಲ ಮಹತ್ಕಾರ್ಯಗಳಿಗೂ ಕಾಂಗ್ರೆಸ್ಸಿನ ಕಣ್ಣಿನಲ್ಲಿ ನೆಹರೂ–ಇಂದಿರಾ ಕಾರಣರಾದರೆ ಈ ದೇಶದಲ್ಲಾಗಿರುವ ಎಲ್ಲ ಅವನತಿಗಳಿಗೂ ಈ ಲೋಹಿಯಾವಾದಿಗಳ ಕಣ್ಣಿನಲ್ಲಿ ನೆಹರೂ ಮತ್ತು ಇಂದಿರಾಗಳೇ ಕಾರಣ. (ನೂರಾರು ಭಾಷೆ-ಸಂಸ್ಕೃತಿ-ಜಾತಿಗಳು ಇರುವ ಈ ವೈವಿಧ್ಯಮಯ ದೇಶದಲ್ಲಿ ಯಾವುದೇ ಬದಲಾವಣೆಗೆ ಒಬ್ಬ ವ್ಯಕ್ತಿ ಕಾರಣನಾಗುತ್ತಾನೆ ಎನ್ನುವುದು ನನಗಂತೂ ಊಹಿಸಲೂ ಸಾಧ್ಯವಾಗುವುದಿಲ್ಲ) ತಮ್ಮ ಇಂತಹ ಹಳದಿ ದೃಷ್ಟಿಯಿಂದಾಗಿ ಈ ಜನ ಆಗಿರುವ ಪ್ರಗತಿಯನ್ನು ನೋಡದೆ ಬಲವಂತವಾಗಿ ಕಣ್ಣಿಗೆ ಬಿಸಿ ಎಣ್ಣೆ ಹುಯಿಂದುಕೊಳ್ಳುತ್ತಾರೆ. ಈ ಕಾರಣದಿಂದಾಗಿಯೇ ನಮ್ಮ ದೇಶದ ಗ್ರಾಮಾಂತರ ಪ್ರದೇಶದಲ್ಲಿಯ ಭೂ ಸಂಬಂಧದಲ್ಲಿ ಒಂದಾಗಿರುವ ಮೂಲಭೂತ ರಚನಾತ್ಮಕ ಬದಲಾವಣೆಗಳು ಈ ಲೋಹಿಯಾವಾದಿಗಳ ಕಣ್ಣಿಗೆ ಬೀಳುವುದೇ ಇಲ್ಲ. ಬಿದ್ದರೂ ಅವುಗಳನ್ನು ತೇಪೆದಾರಿ ಕೆಲಸ ಎಂದು ಹೀಗಳೆಯುವುದೇ ಇವರ ಕರ್ತವ್ಯವಾಗುತ್ತದೆ, ಅದು ಸಾಧ್ಯವಾಗದಿದ್ದಲ್ಲಿ ಇಂತಹ ದೃಷ್ಟಿ

ಕೋಣ ಬೆಳೆಸಲು ಪ್ರಯತ್ನಿಸುವವರನ್ನು ನೆಹರೂ–ಇಂದಿರಾ ಏಜಂಟ್‌ಗಳೆಂದು ಹೇಳಿ ಇವರು ತೃಪ್ತಿ ಪಡುತ್ತಾರೆ.

ತಮ್ಮ ಇಂತಹ ಸನ್ನಿಪಾತದಿಂದಾಗಿ ಇವರು ಸಾಮಾಜಿಕ ಬದಲಾವಣೆಯನ್ನು ಕಾಣುವ, ಅರಸುವ, ಪ್ರಚೋದಿಸುವ ತಮ್ಮ ಶಕ್ತಿಯನ್ನೇ ಕಳೆದುಕೊಳ್ಳುತ್ತಾರೆ. ಬದುಕಿನ ಸಂಕೀರ್ಣತೆಯನ್ನು, ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯಲ್ಲಿ ಅಂತರ್ವಿಹಿತವಾಗಿರುವ ಕಾಂಪ್ಲೆಕ್ಸಿಟಿಗಳನ್ನು ಅರ್ಥಮಾಡಿಕೊಳ್ಳಲು ಇವರು ಬದುಕನ್ನು ಒಂದು ಫಾರ್ಮುಲಾ ಎಂದೂ, ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯನ್ನು Uni Dimensional ಎಂದೂ ಪರಿಗಣಿಸುತ್ತಾರೆ. ಆದುದರಿಂದಲೇ ಕೆಳವರ್ಗ ಹಾಗೂ ಕೆಳಜಾತಿಗಳ ನೋವುಗಳನ್ನು ತಣಿಸಲು ಮಾಡಲಾದ ಪ್ರಯತ್ನಗಳು ಇವರಿಗೆ ಒಂದು ಚೂರು ಎಂಜಲಂತೆ ಕಂಡು ಬರುತ್ತದೆ. ಇಂತಹ ಜನರಿಗೆ ಒಟ್ಟಾರೆ ವ್ಯವಸ್ಥೆಯ ಬಗ್ಗೆ ದ್ವೇಷ, ಜುಗುಪ್ಸೆ ಬರದಂತೆ ನೋಡಿಕೊಳ್ಳಲು ಮಾಡಲಾಗುತ್ತಿರುವ ಕುತಂತ್ರಗಳಂತೆ ಕಂಡುಬರುತ್ತದೆ. ಹಾಗಾದರೆ ಕ್ರಾಂತಿ ಆಗಬೇಕು ಎಂದು ಬಯಸುವವರು ಹೆಚ್ಚು ಸಂಖ್ಯೆಯಲ್ಲಿ ಬಡವರನ್ನೂ, ಬಡತನವನ್ನೂ, ದ್ವೇಷ-ಜುಗುಪ್ಸೆಗಳನ್ನೂ ಹುಟ್ಟುಹಾಕಬೇಕಿತ್ತು. ನೋಡು ಶೂದ್ರ, ಹೇಗೆ ಮಾನವನ ಬಗೆಗಿನ ಪ್ರೀತಿಯು ಒಡಲೊಳಗಿಂದ ಹೊರಟು ಯೋಚನಾಕ್ರಮ ಹೇಗೆ ಮಾನವ ವಿರೋಧಿಯಾಗುತ್ತದೆ.

ಜಗತ್ತಿನಲ್ಲಿ ಯಾರೂ ಹಿಂದೆ-ಮುಂದೆ ಎಂದೂ ಹೇಳಲಾರದಂಥದ್ದನ್ನು ಲೋಹಿಯಾ ಹೇಳಿದ್ದಾರೆ ಎಂದು ತಮ್ಮನ್ನು ಲೋಹಿಯಾವಾದಿಯೆಂದು ಕರೆದುಕೊಳ್ಳುವ ಹಲವಾರು ಮಂದಿ ನನಗೆ ಹೇಳಿದ್ದಾರೆ. ಆದರೆ ಅಂತಹ ಅಗಾಧವಾದದ್ದು ಯಾವುದು ಎಂದು ಹೇಳಿದಾಗ ಮಾತ್ರ ಇವರು 1934 ರಿಂದ ಕಾಂಗ್ರೆಸ್ ಸಮಾಜವಾದಿ ಪಕ್ಷ ಊದುತ್ತಿದ್ದ ತಂತ್ರೂರಿಯನ್ನೇ ಊದುತ್ತಾರೆ. ಬಹಳೆಂದರೆ ಹಸಿವು, ದಾರಿದ್ರ್ಯ, ಬೆತ್ತಲೆತನ ತಾಂಡವವಾಡುತ್ತಿರುವ ನಮ್ಮ ದೇಶದಲ್ಲಿ ಜಾತಿ ಭಾಷೆ–ಸಂಸ್ಕೃತಿಯ ಮಾತನಾಡುತ್ತಾರೆ. ಬೆಂಗಳೂರಿನ ಬಾರಿನಲ್ಲಿ ಎರಡು ಬಾಟಲು ಬಿಯರು ಹಾಕಿಕೊಂಡು ಒಬ್ಬ ವ್ಯಕ್ತಿಯು ಹಸಿವು, ದಾರಿದ್ರ್ಯ, ಬೆತ್ತಲೆತನಕ್ಕೂ, ಭಾಷೆ ಹಾಗೂ ಜಾತಿಗಳಿಗೂ ಹೇಗೆ ಸಂಬಂಧವಿದೆ ಎಂಬ ಬಗ್ಗೆ ಗಂಟಲೆಗಟ್ಟಲೆ ತೊದಲುತ್ತಾ ತೂರಾಡುತ್ತಾರೆ. ಹೆತ್ತವರಿಗೆ ಹೆಗ್ಗಣವೇ ಮುದ್ದು ಎಂಬಂತೆ ಲೋಹಿಯಾವಾದಿಗಳಿಗೆ ಲೋಹಿಯಾನೇ ಚಂಡ-ಪ್ರಚಂಡ-ಮಾರ್ತಂಡ. ಅಂಬೇಡ್ಕರ್ ಇಲ್ಲದ ಆಟೆನ್‌ಬರೋನ ಗಾಂಧಿಯನ್ನು ದಲಿತರು ಬರೇ ಬಹಿಷ್ಕರಿಸಿದೆ, ಲೋಹಿಯಾ ಇಲ್ಲದ ಗುನಾರ್ ಮಿರ್ದಾಲ್‌ನನ್ನು ನಮ್ಮ ಲೋಹಿಯಾವಾದಿಗಳು ಕೈಗೆ ಸಿಕ್ಕರೆ ಜೀವಂತ ಸುಟ್ಟುಬಿಟ್ಟಾರು. ಲೋಹಿಯಾ ಜಗದ್ವಿಖ್ಯಾತ ಎಂದು ತಾನು ತಿಳಿದ ಮಾತ್ರಕ್ಕೆ ಆತ ಹಾಗೆ ಆಗಿರಲೇ ಬೇಕೆಂದು ನಂಬಿ ಆತನಿಗೆ ಸಾಷ್ಟಾಂಗ ಪ್ರಣಾಮ

ಮಾಡಿ ಗ್ರಂಥರಚನೆಯನ್ನು ಪ್ರಾರಂಭಿಸಿದ ಗುನ್ನಾರ್ ಮಿರ್ಡಾಲನ ಅಂತರಾಳದಲ್ಲಿ ಹೊಕ್ಕ ಕಾರಣ ಹುಡುಕಲು ಸುಚೇತನ ಮಾಡುವ ಪರದಾಟವನ್ನೂ, ಕೊನೆಗೂ ಕಂಡು ಹಿಡಿಯುವ ಕಾರಣವನ್ನೂ (ನೋಡು, ಮಂತ್ರಿ ಅದೇ ನೆಹರೂ-ಪ್ರಜಾಪ್ರಭುತ್ವ ವಿರೋಧಿ ವ್ಯಕ್ತಿನಿಷ್ಠ) ನೋಡಿದರೆ ಅವನತಿಯ ದಾರಿ ಹಿಡಿದ ಒಂದು ಮನಸ್ಸು ಎಷ್ಟೊಂದು ಕೊಳಕಾಗಬಹುದಲ್ಲ ಎನಿಸುತ್ತದೆ. ನೆಹರೂ ವಂಶವನ್ನು ಕರ್ನಾಟಕಕ್ಕೆ ತೆಗೆದುಕೊಂಡರೆ ಮಾತ್ರ ಭಾರತದ ಸಮಸ್ಯೆಗಳನ್ನು ಬಂಡವಾಳ ಜಾಲಾಡುವುದು ಸಾಧ್ಯ ಎಂದು ನಂಬುವವರನ್ನು ನೋಡಿದರೆ ಅಯ್ಯೋ ಪಾಪ! ಎನಿಸುತ್ತದೆ.

ಹೈದರಾಬಾದಿನಲ್ಲಿ ಯಾವ ಮುಸಲ್ಮಾನ ಮುದುಕಿಯನ್ನು ಕೇಳಿದರೂ ಅವಳು ನಿಜಾಮನೊಂದಿಗೆ ತನ್ನ ದೂರದ ಸಂಬಂಧವನ್ನು ಗುರುತಿಸಿಕೊಳ್ಳಲು ಪಟಗುಟ್ಟುತ್ತಾಳಂತೆ ಹಾಗೆಯೇ ಕಾಂಗ್ರೆಸ್ಸಿನವರು ತಂದ ಕಾರ್ಯಕ್ರಮಗಳು, ಪಶ್ಚಿಮ ಬಂಗಾಳದಲ್ಲಿ ಕಮ್ಯೂನಿಸ್ಟರು ತಂದ ಕಾರ್ಯಕ್ರಮಗಳು ಲೋಹಿಯಾವಾದಿಗಳು ತಂದ ಕಾರ್ಯಕ್ರಮವಾಗುತ್ತವೆ.

ಬಹಳ ಜನ ಕ್ರಾಂತಿಯ ಬಗ್ಗೆ ಬಹಳ ರೊಮ್ಯಾಂಟಿಕ್ ಕಲ್ಪನೆಗಳನ್ನು ಇಟ್ಟುಕೊಂಡಿರುತ್ತಾರೆ. ಕ್ರಾಂತಿಯ ಬಗ್ಗೆ ಮಾತನಾಡಿದ ಮಾರ್ಕ್ಸ್, ಏಂಗೆಲ್ಸ್, ಸ್ಟಾಲಿನ್, ಲೆನಿನ್ ಮುಂತಾದ ಎಲ್ಲರೂ ಮಧ್ಯ ಅಥವಾ ಶ್ರೀಮಂತ ವರ್ಗದಿಂದ ಬಂದವರೇ. ವಿಕಾಸದ ಬಗ್ಗೆ ಮಾತನಾಡಿದ ಬರ್ನ್‌ಸ್ಟೈನ್, ಬರ್ನಾರ್ಡ್ ಷಾ ಮಾತ್ರ ಅಲ್ಲ, ಭಾರತದ ಸಂದರ್ಭದಲ್ಲಿ ಕ್ರಾಂತಿಯ ಬಗ್ಗೆ ಮಾತನಾಡುವವರೂ ಮೇಲ್ಜಾತಿ ಶೂದ್ರರೇ ಆಗಲು ಸಾಧ್ಯ. ಹಸಿದ ವ್ಯಕ್ತಿ ಕ್ರಾಂತಿ ಮಾಡಲಾರ ಎನ್ನುವುದು ಸುಳ್ಳೇನಲ್ಲ. ಆದುದರಿಂದ ಕಮ್ಯೂನಿಸ್ಟ್ ಅಥವಾ ಸಮಾಜವಾದಿ ಪಕ್ಷಗಳಲ್ಲಿ ಮೇಲ್ಜಾತಿ ಶೂದ್ರರೇ ತುಂಬಿಕೊಂಡಿರುವುದು ಸ್ವಾಭಾವಿಕ ಕೂಡ, ಮನುಷ್ಯನನ್ನು ಒಂದು Ideal model ಎಂದು ಸರಳೀಕರಿಸುವ ಬುದ್ಧಿ ಜೀವಿಗಳ ಪರದಾಟ ಹೇಳತೀರದು. ಪಾದವನ್ನೇ ಮಾಡದ ವ್ಯಕ್ತಿಯೇ ಇಲ್ಲ, ದುಃಖವೇ ಇಲ್ಲದ ಮನೆಯೇ ಇಲ್ಲ ಎಂದು ಜೀಸಸ್ ಹಾಗೂ ಬುದ್ಧ ಸಾವಿರಾರು ವರ್ಷಗಳ ಹಿಂದೆಯೇ Demonstrate ಮಾಡಿ ತೋರಿಸಿದ್ದರೂ ಇಂದಿಗೂ ನಾವು ತಪ್ಪುಗಳನ್ನೇ ಮಾಡದ ವ್ಯಕ್ತಿಗಳನ್ನ ಹುಡುಕುತ್ತಿರುತ್ತೇವೆ. ನಾನು ನನ್ನ ಮಗಳನ್ನು ಇಂಗ್ಲಿಷ್ ಸ್ಕೂಲಿಗೆ ಕಳಿಸುವುದನ್ನೇ ಎತ್ತಿ ತೋರಿಸುವ ನನ್ನ ಗೆಳೆಯ ವರದಕ್ಷಿಣೆ ಇಲ್ಲದೆ ನಾನು ಅಂತರ್ಜಾತೀಯ ವಿವಾಹವಾದದ್ದನ್ನು ಗಮನಿಸುವುದಿಲ್ಲ. ಹಾಗೆಯೇ ಪಟೇಲರು ಜಾತಿ ಸಮ್ಮೇಳನಕ್ಕೆ ಹೋಗಿದ್ದರು ಎಂದು ಹೇಳುವ ಜನ ದಟ್ಟದರಿದ್ರ ಈ ದೇಶದಲ್ಲಿ ತಾವು Five Star ಹೋಟೆಲಿನಲ್ಲಿ ಕುಳಿತು ಈ ತರಹೆಯ ಟೀಕೆ ಮಾಡುತ್ತಿದ್ದೇವೆ ಎಂಬುದು ಅವರ ಕಲ್ಲುತಲೆಯೊಳಗೆ ಹೋಗುವುದೇ ಇಲ್ಲ. ಹೆಚ್ಚಿಲ್ಲದಿದ್ದರೂ ಜಾತಿ ಸಮ್ಮೇಳನಕ್ಕೆ

ಹೋಗುವುದು ಬೇರು ಕುಡಿಯುವಷ್ಟು ಮಹಾ ಪಾತಕವಲ್ಲವೇ ಈ ದೇಶದಲ್ಲಿ. ಮನುಷ್ಯ ಒಂದು ಸಮೀಕರಣವಲ್ಲ, ವೈರುಧ್ಯಗಳು ಸಂಶ್ಲೇಷಣೆಯಲ್ಲಿ ಪರ್ಯವಸಾನ ಹೊಂದುತ್ತವೆ ಎಂದು ಮಾರ್ಕ್ಸ್ ಎಷ್ಟೇ ಬೊಬ್ಬೆ ಹೊಡೆದಿದ್ದರೂ ಕನಿಷ್ಠ ವೈಯಕ್ತಿಕ ಬದುಕಿನಲ್ಲಿ ಮಾನವ ಇಂತಹ ವೈರುಧ್ಯಗಳೊಂದಿಗೆ ಬದುಕಬೇಕಾಗುತ್ತದೆ. ಸ್ವತಃ ಮಾರ್ಕ್ಸ್‌ನೇ ತನ್ನ ಬದುಕಿನಲ್ಲೇ ವೈರುಧ್ಯಗಳನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ ಎಂದಾಗ ಪಟೇಲರೇನು ಬಿಡಿ. ಸಮಾಜವಾದಿ ಸಂಘಟನೆ ಕ್ಷೀಣಿಸಲು ಇಂತಹ ಸಣ್ಣತನಗಳೇ ಕಾರಣ. ಯಾವುದೇ ಸಿದ್ಧಾಂತವನ್ನೂ, ಸಂಘಟನೆಯನ್ನೂ ಸಾಮಾಜಿಕ ಬದಲಾವಣೆಯನ್ನು ವೀಕ್ಷಿಸುವ ಮೊದಲು ನಾವು ನಮ್ಮ ದೃಷ್ಟಿಯನ್ನು ವಿಶಾಲಗೊಳಿಸುವುದು ಒಳಿತಲ್ಲವೇ ಶೂದ್ರ ?

26-11-84 —ಬಾಪು. ಹೆದ್ದೂರಶೆಟ್ಟಿ

ಪ್ರಿಯ ಶೂದ್ರ,

ಡಿಸೆಂಬರ್ ಸಂಚಿಕೆ ಬಂತು.

ಡಾ|| ಬಿ. ಕೃಷ್ಣಮೂರ್ತಿಯವರ, ಲಕ್ಷ್ಮೀಪಾಟೀಲರ ಲೇಖನ ಮನಸ್ಸಿಗೆ ತುಂಬ ಹಿಡಿದವು. ಕೃಷ್ಣಮೂರ್ತಿಯವರಿಗೆ ಚಿಂತನೆ ಹಾಗೂ ಬರವಣಿಗೆಯ ನಿಖರತೆ ದಕ್ಕಿರುವುದಲ್ಲದೆ ಶುದ್ಧ ಸಾಮಾಜಿಕ ಕಳಕಳಿ ಇದೆ. ಲಕ್ಷ್ಮೀಪಾಟೀಲರದ್ದು ಉತ್ತಮ ಕಥೆಯಂತೆ ತಟ್ಟುತ್ತದೆ.

ನಿನ್ನವ
ಬಿದಿರಹಳ್ಳಿ ನರಸಿಂಹಮೂರ್ತಿ
ಹೈದರಾಬಾದ್

ಡಿ. 19, 1984



# ಕನಸಿಗೊಂದು ಕಣ್ಣು

## ಓ ನನ್ನ ಪ್ರಜಾಪ್ರಭುತ್ವ ... ...

28ರ ಸಂಜೆ ಪ್ರಜಾಪ್ರಭುತ್ವದ ಹಣೇಬರಹಕ್ಕೆ ಸಂಬಂಧಿಸಿದಂತೆ ವರದಿಗಳು ಶುರುವಾದಾಗಲೇ ಗಾಬರಿಗೊಂಡೆ. ಗೆಳೆಯನ ಮನೆಯಲ್ಲಿ ದೂರದರ್ಶನವನ್ನು ವೀಕ್ಷಿಸುವುದು ಕಷ್ಟವಾಯಿತು. ಗೆಳೆಯನ ಮನೆಬಿಟ್ಟು ಹತ್ತುಮುವತ್ತರ ಸಮಯಕ್ಕೆ ಲಕ್ಕಸಂದ್ರದ ಬಳಿಗೆ ಬಂದು ಬಸ್ಸಿಗಾಗಿ ಕಾಯುತ್ತಿದ್ದೆ. ರಸ್ತೆಯ ಪಕ್ಕದಲ್ಲಿಯೇ ಇದ್ದ ಸ್ಲಮ್ಮನ್ನು ಎಷ್ಟೋ ವರ್ಷಗಳಿಂದ ನೋಡುತ್ತ ಬಂದಿದ್ದೆ. ಒಂದು ದಿನವೂ ಒಳಗೆ ಹೋಗಿ ನೋಡಿರಲಿಲ್ಲ. ಒಂದಷ್ಟು ಮಂದಿ ಧ್ವನಿಯೆತ್ತರಿಸಿ ಹಾಡುತ್ತಿದ್ದುದು ಕೇಳಿಸಿತು. ಬಸ್ಸು ಬರಲು ಇನ್ನು ಕಾಲುಗಂಟೆ ಇದ್ದುದರಿಂದ, ಒಳಗೆ ಹೋಗಿ ನೋಡಿ ಬರುವ ಎಂದು ಹೋದೆ. ಒಳಗೆ ಹೋಗಲು ಕಷ್ಟವೆನ್ನುವ ರೀತಿಯ ಕಾಲುದಾರಿ. ಪುಟ್ಟ ಪುಟ್ಟ ಗುಡಿಸಲುಗಳು. ಒಬ್ಬ ಮನುಷ್ಯ ಒಳಹೋಗಲು ಸಾಧ್ಯವಾಗದೆನ್ನುವ ರೀತಿಯ ಬಾಗಿಲುಗಳು. ಒಂದು ಮೂಲೆಯಲ್ಲಿ ಗುಡಿಸಲುಗಳ ಮಧ್ಯೆ 5X5 ರಷ್ಟು ಜಾಗವಿತ್ತು. ಅಲ್ಲಿ ಇಂದಿರಾಗಾಂಧಿಯ ಭಾವಚಿತ್ರವನ್ನು ಅಲಂಕರಿಸಿದ್ದರು. ಅದರ ಪಕ್ಕದಲ್ಲಿ ಕಪ್ಪು ಕನ್ನಡಕಧಾರಿ ಎಂ.ಜಿ. ಆರ್.ನ ಬಣ್ಣಬಣ್ಣದ ಭಾವಚಿತ್ರ. ಎಷ್ಟಾದರೂ ಚಲನಚಿತ್ರನಾಯಕನಾಗಿದ್ದರಿಂದ ಆತನನ್ನು ಹಾಗೆಯೇ ನೋಡುತ್ತ ಬಂದಿದ್ದಾರೆ.

ಅದಕ್ಕೆ ಪೂಜೆಯನ್ನು ಮಾಡುತ್ತಿದ್ದರು. ಕಾಂಗ್ರೆ ಗೆಲ್ಲುತ್ತಿದೆಯೆಂಬ ಕಾರಣ ಇರಬಹುದು. ಅದೇ ಕಾರಣವಾಗಿದೆಯೆಂದು ತಿಳಿಯಲು ಬಹಳ ಸಮಯ ಬೇಕಾಗಲಿಲ್ಲ. ಹೆಂಗಸರು ಮತ್ತು ಗಂಡಸರು ಒಟ್ಟಿಗೆ ಸೇರಿದ್ದರು. ಸುಮಾರು ಐವತ್ತು ಮಂದಿಯಾದರೂ ಇದ್ದರು ಅನ್ನಿಸುತ್ತೆ. ನನ್ನನ್ನು ಎಲ್ಲರೂ ವಿಚಿತ್ರವಾಗಿ ನೋಡತೊಡಗಿದರು. ಅವರಿಗಿಂತ ನಾನು ಭಿನ್ನವಾಗಿ ಕಾಣುತ್ತಿದ್ದುದರಿಂದ ಅವರ ದೃಷ್ಟಿಯಲ್ಲಿ ಸಿ.ಐ.ಡಿ. ಆಗಿದ್ದೆ. ಅವರು ಮಾತಾಡುತ್ತಿದ್ದ ತಮಿಳು ಅರ್ಥವಾಗುತ್ತಿತ್ತು. ಆದರೆ ಅವರೊಡನೆ ಸಂಭಾಷಣೆಗೆ ತೊಡಗುವಷ್ಟು ತಮಿಳು ನನಗೆ ಬರುತ್ತಿರಲಿಲ್ಲ, ಆದರೂ ಮಾತುಕತೆಗೆ ತೊಡಗಿದೆ. ನನ್ನ ಮಾತುಗಳು ಅವರಿಗೆ ಇಷ್ಟವಿಲ್ಲ

ಅನ್ನಿಸಲು ತಡವಾಗಲಿಲ್ಲ. ಅದು ಸ್ವಾಭಾವಿಕವೂ ಆಗಿತ್ತು. ಅಷ್ಟರಲ್ಲಿ ಒಬ್ಬ ಬಂದು ನನ್ನ ಹೆಸರು, ವಿಳಾಸ ಕೇಳಿದ. ಹೇಳಿದೆ. ಆದರೂ ನಂಬಲಿಲ್ಲ, 'ನೀನು ಸಿ.ಐ.ಡಿ.' ಎಂದ. ಅಲ್ಲ ಎಂದು ಸಾಬೀತು ಪಡಿಸುವ ಸಮಯ ಅದಾಗಿರಲಿಲ್ಲ. ಎಲ್ಲರೂ ಊಟಕ್ಕೆ ಕೂತರು, ನನ್ನನ್ನು ತೆಗೆದುಕೊಳ್ಳಲು ಹೇಳಿದರು. ಬೇಡವೆಂದು ಹಿಂದಿರುಗಿದೆ. ಅಲ್ಲಿ ಕೂತ ಹೆಂಗಸರೆಲ್ಲ ಕಿಲಕಿಲನೆ ನಗತೊಡಗಿದರು. ಬೆನ್ನ ಹಿಂದಿನ ಹಿಂಸೆಯನ್ನು ಹೊತ್ತು ಮನೆಗೆ ಬಂದೆ.

ಮಾರನೆಯ ದಿನ ಸಂಜೆ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಸಾರ್ವಜನಿಕ ಸಭೆ ಇತ್ತು. ಗೆಳೆಯರೊಡನೆ ಸುತ್ತಾಡಿ ಬಂದಾಗ ನಸೀರ್‌ಸಾಬ್ ಮಾತಾಡುತ್ತಿದ್ದರು. ಆಗಲೇ ಸಾಕಷ್ಟು ಮಂದಿ ಸೇರಿದ್ದರು. ನಸೀರ್‌ಸಾಬ್ ನಕಲಿ ಗಾಂಧಿಗಳ ಬಗ್ಗೆ ಮಾತಾಡುತ್ತ ನಿಜವಾದ ಗಾಂಧಿಯನ್ನು ಮರೆಮಾಡುತ್ತಿದ್ದಾರೆ ಎಂದು ವಿವರಿಸುತ್ತಿದ್ದರು. ಮಳೆ ಸುರುವಾಯಿತು. ಜನ ಕೂತೇ ಇದ್ದರು, ನಸೀರ್‌ಸಾಬ್ ಭಾಷಣ ನಿಲ್ಲಿಸಲು ಪ್ರಯತ್ನಿಸಿದಾಗ ಜನ ಒಕ್ಕೊರಲಿನಿಂದ 'ಮಾತಾಡಿ ಮಾತಾಡಿ ನಿಲ್ಲಿಸಬೇಡಿ' ಎಂದು ಕೂಗ ತೊಡಗಿದರು. ಮಳೆ ಸಾಕಷ್ಟು ಜೋರಾಯಿತು. ಸಂಕೋಚದಿಂದ ನಸೀರ್ ಸಾಬ್ ಭಾಷಣ ನಿಲ್ಲಿಸಿದರು, ಜನರ ಪ್ರೀತಿಯನ್ನು ಎದುರಿಸಲಾರದೆ. ಆದರೂ ಜನ ಚದುರಲಿಲ್ಲ, ಹೆಚ್ಚು ಹೆಚ್ಚು ಸೇರುತ್ತಲೇ ಇದ್ದರು, ಒಂದಷ್ಟು ಮಂದಿ ವೇದಿಕೆಯ ಮೇಲೆ ನುಗ್ಗಿದರು. ವೇದಿಕೆಯ ಮೇಲೆ ಸಾಕಷ್ಟು ಮಂದಿ ಮಂತ್ರಿಗಳಿದ್ದರು. ಎಲ್ಲರೂ ನೆನೆದು ಒದ್ದೆಯಾಗಿದ್ದರು ಬಯಲಿನಲ್ಲಿ ಕಿಕ್ಕಿರಿದ ಮಂದಿ 'ಹೆಗಡೆ ... ಹೆಗಡೆ' ಎಂದು ಕೂಗುತ್ತಿದ್ದರು. ಹೆಗಡೆ ನೆನೆಯುತ್ತ ಬಂದರು. ಇಷ್ಟೊತ್ತಿಗೆ ಮಳೆ ಸುರುವಾಗಿ ಮುಕ್ಕಾಲು ಗಂಟೆಯಾಗಿತ್ತು. ಎತ್ತ ನೋಡಿದರೂ ಜನ. ಈ ಮನುಷ್ಯರ ಭಾವನಾ ಪ್ರಪಂಚ ಎಷ್ಟೊಂದು ವಿಸ್ತೃತವಾದದ್ದು ಅನ್ನಿಸಿತು.

ಮಳೆಯ ಕಾರಣ ಮೈಕಿಗೆ ಸಂಬಂಧಿಸಿದ ವಿದ್ಯುತ್ ಸಂಪರ್ಕವನ್ನು ತಪ್ಪಿಸಿದ್ದರು. ಆದರೆ ಹೆಗಡೆಯವರು ಮಾತಾಡದೆ ಜನ ಸಮೂಹವನ್ನು ತಡೆಯುವುದು ಕಷ್ಟವೆನ್ನಿಸಿ ಮೈಕಿಗೆ ವಿದ್ಯುತ್ ಸಂಪರ್ಕಕೊಟ್ಟು ಹೆಗಡೆ ಧ್ವನಿ ಬಿಟ್ಟಾಗ ಜನರ ಜಯಕಾರ ಮಳೆಯ ತಂಡಿಯನ್ನು ಬಿಸಿಮಾಡಿರಬೇಕು, ಆ ಬಿಸಿಯ ನಡುವೆ ಆ ಜನತೆಯ ಕೂಗು ಮತ್ತು ಉತ್ಸಾಹ ಅಪ್ರತಿಮವಾದದ್ದು ಅನ್ನಿಸಿತು.

ಜನತಾ ಸರಕಾರ ಅಷ್ಟು ಮಹತ್ತರವಾದದ್ದನ್ನು ಮಾಡದಿದ್ದರೂ ; ಇವರು ಮಂತ್ರಿ ಪದವಿಯ ದರ್ಬಾರಿಯ ಕಲ್ಪನೆಯನ್ನು ಕಿತ್ತಿದ್ದೆ ಹೆಚ್ಚುಗಾರಿಕೆಯನ್ನಬಹುದು. ಆದರೆ ಕಾಂಗ್ರೆಸ್ಸಿನ ಬಹಳಷ್ಟು ದುಷ್ಟಮಾದರಿಗಳಿಂದ ಬಿಡುಗಡೆಯಾಗಿ ಹೆಚ್ಚು ಕ್ರಿಯಾಶೀಲರಾಗಲು ಪ್ರಯತ್ನಿಸಲಿಲ್ಲ. ಹಾಗೆಯೇ ಕೆಲವು ಕಾರ್ಯಕ್ರಮಗಳನ್ನು

ಜನತೆಗೆ ತಲುಪಿಸಲು ಮಾಧ್ಯಮಗಳನ್ನು ಬಳಸಿಕೊಳ್ಳಲೇ ಇಲ್ಲ. ಅತ್ಯಂತ ಸೋಮಾರಿತನವನ್ನು ಬೆಳೆಸಿಕೊಂಡರು. ಇದು ಶ್ರೀಮತಿ ಗಾಂಧಿಯವರ ಮರಣೋತ್ತರ ನಾಟಕಗಳ ಪ್ರಸಾರಕ್ಕೆ ಅವಕಾಶವಾಯಿತು.

ಇದೇನೆ ಇರಲಿ ನಮ್ಮಲ್ಲಿಯ ಜಾತಿ, ಧರ್ಮ ಮತ್ತು ಭಾಷೆಗೆ ಸಂಬಂಧಿಸಿದ ಭಾವನೆಗಳನ್ನು ಅತ್ಯಂತ ಹೀನವಾಗಿ ಬಳಸಿಕೊಳ್ಳುತ್ತಿರುವುದರಿಂದ ಪ್ರಜಾಪ್ರಭುತ್ವದ ಸುಂದರ ಕಲ್ಪನೆಗಳನ್ನು ಮೂಲೆ ಗುಂಪು ಮಾಡುತ್ತಿದ್ದೇವೆ. ನಮ್ಮ ಎಲ್ಲಾ ಪಕ್ಷಗಳ ಯಜಮಾನರು ಜಾತಿಯ ರಾಜಕೀಯ ಸವಲತ್ತು ಎನ್ನುವ ಮಟ್ಟಿಗೆ ತಲುಪಿದ್ದಾರೆ. ಆದರೆ ಒಂದು ಸಣ್ಣ ತ್ಯಾಗದಿಂದಲೇ ಪುಳಕಿತರಾಗುವ ನಮ್ಮ ಜನಕ್ಕೆ ನಿಜವಾದ ನಾಯಕ ಬೇಕಾಗಿದೆ. ನಕಲಿಗಾಂಧಿಗಳಿಂದ ಬಿಡುಗಡೆಯಾಗ ಬೇಕಾದರೆ, ಮಹಾತ್ಮ ಗಾಂಧಿಯ ಸ್ಥಾನವನ್ನು ತುಂಬುವ ನಾಯಕ ಬೇಕಾಗಿದೆ ಎಂಬುದರಲ್ಲಿ ಜನರ ಹೃದಯ ಮಿಡಿಯುತ್ತಿದೆ ಎಂಬುದನ್ನು ತಿಳಿಯಬೇಕಾಗಿದೆ.

ಭಾರತದ ಅತ್ಯಂತ ಹಿರಿಯ ನಾಯಕ ಜಗಜೀವನರಾಂರವರ "ಇದು ಹಿಂದೂ ಭಾರತಕ್ಕೆ ದೊರೆತಮತ" ಎಂಬ ಮಾತು ವಾಸ್ತವ ಎಂಬುದನ್ನು ಎಲ್ಲ ಜನರ ಹೃದಯಕ್ಕೆ ತಲುಪಿಸಬೇಕಾಗಿದೆ. ತಲುಪಿಸದಿದ್ದರೆ ಎಲ್ಲಿಗೆ ತಲುಪುತ್ತೇವೋ ಎಂಬುದನ್ನು ತಮ್ಮ ನಾಯಕರ ಹೃದಯವಂತಿಕೆಗೆ ಸ್ಪಂದಿಸುವ ಜನತೆಗೆ ದ್ರೋಹ ಬಗೆದಂತೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕಾಗಿದೆ

ಅಂತೂ ಪೂರ್ತಿ ಒದ್ದೆಯಾದ ವ್ಯಮನಗಳನ್ನು ಹೊತ್ತು ಸಾವಿರಾರು ಜನರಿಂದ ಬಿಡಿಸಿಕೊಂಡು, ಬಸ್ಸು ಸಿಗದೆ ನಡೆಯುತ್ತ ಲಕ್ಕಸಂದ್ರದ ಬಳಿಗೆ ಬಂದಾಗಲೂ ಮಳೆ ನಿಂತಿರಲಿಲ್ಲ. ಎಲ್ಲ ಜನರನ್ನು ತಣ್ಣಗೆ ಮಾಡಿದಂತೆ ಗುಡಿಸಲು ಮಂದಿಯನ್ನು ಹೆಚ್ಚು ತೋಯ್ಸಿದ ಮಳೆ ಗುಡಿಸಲುಗಳಿಂದಲೂ ಜನರನ್ನು ಹೊರನೂಕಿತ್ತು. ಅದೇ ಸ್ಲಮ್ಮಿನ ಜನ, ಅರ್ಧಕಟ್ಟಿ ನಿಲ್ಲಿಸಿದ್ದ ಬೃಹತಕಟ್ಟಡದೊಳಗೆ ಹೋಗಿ ಅವಿತಿದ್ದರು. ಮತ್ತಷ್ಟು ಮಂದಿ ಬಸ್‌ಸ್ಟಾಪಿನ ಷಲ್ಟರ್‌ಗಳಲ್ಲಿ ಆಶ್ರಯ. ಚಳಿಯಿಂದ ಬಿಡುಗಡೆಯಾಗಲು ಒಬ್ಬರ ಮೇಲೊಬ್ಬರು ಬಿದಿದ್ದ ಹುಡುಗರು, ಮಳೆಗೆ ಪೂರ್ತಿ ನೆನೆದ ತಾಯಿಯ ಎದೆಗೆ ಅಂಟಿಕೊಂಡ ಮಕ್ಕಳು, ನಮ್ಮ ಸ್ವಾತಂತ್ರ್ಯದ ಮಕ್ಕಳು, ಇಂದಿರಾ ಗಾಂಧಿಯನ್ನು ಪೂಜಿಸುತ್ತ ಬಂದ ಮಕ್ಕಳು.

ಹಿರೋಷಿಮಾ-ನಾಗಾಸಾಕಿಯಷ್ಟೇ ಭೀಕರವಾದ ಭೂಪಾಲ್ ದುರಂತವನ್ನು ಮರೆಸುವ ಶ್ರೀಮಂತಿ ಗಾಂಧಿಯ ಬೂದಿಯ ಪಾತ್ರೆಗಳು, ಹಿಮಾಲಯ ಪರ್ವತಗಳ ಮೇಲೆ ಶ್ರೀಮತಿ ಗಾಂಧಿಯನ್ನು ಬೆಳಗಿಸುವ ದೂರದರ್ಶನದ ಕ್ಯಾಮರಾ ಕಣ್ಣುಗಳನ್ನು ವೀಕ್ಷಿಸಿದಾಗ ಅದೇ ಅನ್ನಕ್ಕಾಗಿ, ಬಟ್ಟೆಗಾಗಿ, ಗುಡಿಸಲುಗಳಿಗಾಗಿ ಪರದಾಡುವ ಈ ಮಂದಿಗೆ ಯಾವ ಕನಸುಗಳು ಅಥವಾ ಎಂಥ ನಾಯಕರು ?

31-12-84

ಶೂದ್ರ ಶ್ರೀನಿವಾಸ್

## ನಿಲ್ಲಿ. ಬಿಲ್ ಪಡೆಯುವುದನ್ನು ಮರೆಯಬೇಡಿ ಬಿಲ್ ಪಡೆಯದಿದ್ದರೆ ನಿಮ್ಮನ್ನು ನೀವೆ ವಂಚಿಸಿಕೊಳ್ಳ ಬಹುದು. ಇದು ನಿಮಗೆ ಗೊತ್ತೇ ?

ಎಷ್ಟೋ ಸಲ ಬಿಲ್ ಕೊಡದೆ, ನಿಮಗೆ ತೆರಿಗೆ ಉಳಿಸುವ ನೆಪದಲ್ಲಿ ಮೋಸಗಾರ ವ್ಯಾಪಾರಿಗಳು ಹಾಳಾದ ಮತ್ತು ಖೋಟಾ ವಸ್ತುಗಳನ್ನು ಮಾರುತ್ತಾರೆ. ಹಲವು ಸರಕುಗಳನ್ನು ಈಗಾಗಲೇ ಒಂದೇ ಹಂತದ ತೆರಿಗೆಯ ವ್ಯಾಪ್ತಿಯಲ್ಲಿ ತರಲಾಗಿದೆ. ಅಂದರೆ, ರಾಜ್ಯದಲ್ಲಿ ಮೊದಲು ಮಾರಾಟವಾಗುವ ಹಂತದಲ್ಲೇ ತೆರಿಗೆ ಪಾವತಿ ಮಾಡಿರಲಾಗುತ್ತದೆ. ಬಿಲ್ ಕೊಡದಿದ್ದರೆ ನೀವು ತೆರಿಗೆ ನೀಡಬೇಕಾಗಿಲ್ಲ ಎಂದು ವ್ಯಾಪಾರಿ ಹೇಳಿದರೆ ಅದು ಅಪ್ಪಟ ಸುಳ್ಳು.

ಹೆಚ್ಚಿನ ಸರಕುಗಳಿಗೆ ನೀಡಬೇಕಾದ ತೆರಿಗೆ ದರ ದುಬಾರಿಯೇನಲ್ಲ. ಈ ಸಣ್ಣ ಪ್ರಮಾಣದ ತೆರಿಗೆ ಉಳಿಸುವ ಭ್ರಮೆಯು ಪಡೆಯದಿದ್ದರೆ, ನಿಮಗೆ ಮತ್ತು ನಿಮ್ಮ ಆತ್ಮೀಯರಿಗೆ ತೊಂದರೆಯಾಗುವುದಲ್ಲದೆ ನಿಮಗೇ ತಿಳಿಯದಂತೆ, ಕಾನೂನು ಉಲಂಘಿಸುತ್ತಿರಬಹುದು. ಅಷ್ಟೇ ಅಲ್ಲ, ಇದರಿಂದ ನಿಮಗೆ ಯಾವ ರೀತಿಯ ಲಾಭವೂ ದೊರೆಯುವುದಿಲ್ಲ. ಸಾಮಾಜಿಕ ಪ್ರಜ್ಞೆಯುಳ್ಳ, ಪ್ರಾಮಾಣಿಕ ಪ್ರಜೆಗಳು ಬಿಲ್ ಅನ್ನು ಕೇಳಿ ಪಡೆಯುತ್ತಾರೆ ಹಾಗೂ ತೆರಿಗೆಗಳನ್ನು ನೀಡಬೇಕಾದಲ್ಲಿ ಹಿಂಜರಿಯುವುದಿಲ್ಲ.

ಕೆಲವು ನಿತ್ಯೋಪಯೋಗಿ ಉತ್ಪನ್ನಗಳ ಮೇಲಿನ ಮಾರಾಟ ತೆರಿಗೆ.

| ಸರಕು ಉತ್ಪನ್ನಗಳು | ಮೊದಲ ಹಂತದಲ್ಲೇ ಪಾವತಿ ಮಾಡಲಾದ ತೆರಿಗೆ |
|---|---|
| ಖಾದ್ಯ ತೈಲ (ಶುದ್ಧೀಕರಿಸಿದ್ದು) | ಶೇಕಡ 4 |
| ಮೊಹರಾದ ಡಬ್ಬಿಗಳಲ್ಲಿ ತುಂಬಿಸಿದ ಗಿಣ್ಣು, ತುಪ್ಪ ಹಾಗೂ ಬೆಣ್ಣೆ | ಶೇಕಡ 6 |
| ಡಾಲ್ಡಾ ಪಕಾವ್ ಸೇರಿದ ಎಲ್ಲಾ ತರದ ವನಸ್ಪತಿ ತೈಲಗಳು | ಶೇಕಡ 6 |
| ಜ್ಯಾಮ ಹಣ್ಣಿನ ರಸ ಹಾರ್ಲಿಕ್ಸ್ ಇತ್ಯಾದಿ ಡಬ್ಬಿಗಳಲ್ಲಿ, ಬಾಟಲಿಗಳಲ್ಲಿ ತುಂಬಿದ ಆಹಾರ ಪದಾರ್ಥಗಳು ಮತ್ತು ಹಣ್ಣು | ಶೇಕಡ 8 |
| ಔಷಧಿಯುಕ್ತ ತಯಾರಿಕೆಗಳು | ಶೇಕಡ 8 |
| ಕ್ರಾಕರಿ ಮತ್ತು ಕಟ್ಲರಿ | ಶೇಕಡ 8 |

ಕಾನೂನಿನಂತೆ ಮಾರಾಟ ತೆರಿಗೆಯ ಮೇಲೆ ಶೇ. 10 ಸರ್‌ಚಾರ್ಜ್ ಹಾಗೂ ಶೇ. 10 ರೂರಲ್ ಡೆವಲಪ್‌ಮೆಂಟ್ ಸೆಸ್ (ಗ್ರಾಮೀಣ ಅಭಿವೃದ್ಧಿ ಕರ) ಅನ್ನು ನೀಡಬೇಕು.

"ಕರ್ನಾಟಕ ವಾರ್ತೆ"

## ಸಾದರ ಸ್ವೀಕಾರ:

ಅಂಧೇರಿನಗರಿ (ಕಾದಂಬರಿ)-ಅಬ್ದುಲ್ ಮಜೀದ್‌ಖಾನ್, ಸವಿತಾ ಪ್ರಕಾಶನ, 20, 2ನೇ ಮುಖ್ಯರಸ್ತೆ, 1ನೇ ವಿಭಾಗ ,ರ ಜಾಜಿನಗರ, ಬೆಂಗಳೂರು-560 010,

ಬೆಲೆ : 15ರೂ.

ಸಿಡಿದವರು (ಕಥಾಸಂಕಲನ)—ಆರ್. ಜಿ. ಹಳ್ಳಿ ನಾಗರಾಜ್, 'ಅರುಣ' ಯುವ ಲೇಖಕರ ಬಳಗ, ವಿಜಯನಗರ, ಉತ್ತರ ಬೆಂಗಳೂರು-79

ಬೆಲೆ: 9ರೂ.

ಈ ಕಾವ್ಯಗಳು (ಕವನಸಂಕಲನ)-ಎನ್. ಎಂ. ಕೊಟ್ರೇಶ್ ಶ್ರೀಹರ್ಷ ಪ್ರಕಾಶನ, ಕೊಟ್ಟೂರು, ಬಳ್ಳಾರಿ ಜಿಲ್ಲೆ,

ಬೆಲೆ: 7ರೂ.

ಮಲಪ್ರಭಾ ರೈತರ ಚಳುವಳಿಗಳು ಮತ್ತು ನಂತರ ಬೆಳವಣಿಗಗಳು ರಜಿನಿಕಾಂತ್,ಮನೋಹರ್,ಪ್ರಕಾಶನ, ಸಿ.ಐ.ಇ.ಡಿ.ಎಸ್, ನಂ.7, ಬಾಲಾಜಿ ಲೇಔಟ್, ಬೆಂಗಳೂರು–560 005

ಬೆಲೆ: 1-90ರೂ.

ನೆಲಕ್ಕಾಗಿ ದಲಿತರ ಹೋರಾಟ, ಪ್ರಕಾಶಕರು: ಜನತೆಯ ಹಕ್ಕುಗಳ ಹೋರಾಟ ಸಮಿತಿ ಬೆಂಗಳೂರು

ಬೆಲೆ: 1ರೂ.

ವಾರ್ಲಿ ಗಿರಿಜನ ಹೋರಾಟ, ಲೇಖಕ; ರಾಜನ್‌ಸಿಂಗ್, ಅನು: ಎಂ. ಎಸ್. ಶಂಕರರಾವ್, ಸಿಯೆಡ್ಸ್‌ಸಂಶೋಧನಾ ಪ್ರಕಟಣೆಗಳು–2

ಬೆಲೆ: 10ರೂ.

ನೆಲಹಿಡಿಯುವ ಮೊದಲು (ಕವನಸಂಕಲನ) ಎಚ್. ಎಸ್. ಭೀಮಗೌಡರ್ ಸ್ನೇಹ ಪ್ರಕಾಶನ, ಬೆಳಗಾವಿ,

ಬೆಲೆ: 7ರೂ.

F/NP/KRNU/72 No. M (2)PRB 211/73-74

Shoodra Kannada Monthly

ಮುಂದಿನ ಸಂಚಿಕೆಯಲ್ಲಿ :

ಕಾ. ತ. ಚಿಕ್ಕಣ್ಣ — ದುಂಡಿರಾಜ್ — ಎಲ್ಸಿ. ನಾಗರಾಜ್ — ಗಾಯಿತ್ರಿ ಜಿ. ಪಿ. ಬಸವರಾಜ್—ದೊಡ್ಡಬಸವಯ್ಯ—ಜಿ. ಪಿ. ಉಷಾ—ಹೆಚ್. ಕೆ. ಶಿವಪ್ರಕಾಶ್—ಕನಸಿಗೊಂದು ಕಣ್ಣು—ಹಾಗೂ ನಿರ್ದೇಶಕರಾಗಿ ಜಯತೀರ್ಥ ಜೋಶಿ.—ಕೆ. ಎಸ್. ಪ್ರದೀಪ್‌ಕುಮಾರ್.



ಕೆ. ಜಿ. ಸುಬ್ರಹ್ಮಣ್ಯನ್

Printed at : Shalivahan Printers, Bangalore-53.
Editor & Publisher: M. SRINIVAS